Phone: 118

P. B. No 3

# ರಾಯಭಾರಿ

ರಾಷ್ಟ್ರೀಯ ಕನ್ನಡ ವಾರಪತ್ರಿಕೆ

20-9-1967

ಬೆಲೆ ೧೨ ಪೈಸೆ.

## ಕುಟುಂಬ ಯೋಜನೆಯ ಪುರಸ್ಕರ್ತರು ಗಮನಿಸಬೇಕಾಗಿರುವ ಸಂಗತಿ

ಈ ವಾರದಲ್ಲಿ ಕುಟುಂಬ ಯೋಜನೆಯ ಕುರಿತು ಅನೇಕ ರೀತಿಯ ಸಭೆ ಸಮಾರಂಭಗಳು ಜರಗುತ್ತಿವೆ. ಕುಟುಂಬ ಯೋಜನೆಯನ್ನು ಪರಿಣಾಮಕಾರೀ ರೀತಿಯಲ್ಲಿ ಕಾರ್ಯಾಚರಣೆಯಲ್ಲಿ ತರಬೇಕೆನ್ನುವ ಪ್ರಯತ್ನ ನಡೆದಿದೆ.

ಸರಕಾರದ ಇತರ ಯೋಜನೆಗಳಂತೆ ಇದು ಶರವೇಗದಿಂದ ಮುನ್ನಡೆಯಲು ಸಾಧ್ಯವಿಲ್ಲವೆನ್ನುವದನ್ನು ಅರಿತಿದ್ದೇವೆ. ಏಕೆಂದರೆ ಇದು ಆತ್ಮಪ್ರೇರೇಪಣೆಯಿಂದ ನಡೆಯಬೇಕಾಗಿರುವ ಕಾರ್ಯವಾಗಿರುತ್ತದೆ. ಈ ವಿಷಯದಲ್ಲಿ ಅನೇಕ ತಪ್ಪು ಕಲ್ಪನೆಗಳಿರುತ್ತವೆನ್ನುವದೂ ಸಹಜ. ಭಾರತೀಯ ಸಂಸ್ಕೃತಿಯಂತೆ ಸಂತಾನ ಪ್ರತಿಬಂಧ ನಿಷೇಧವಾಗಿದೆ. ಆದರೆ ಹಿಂದೂ ಸಂಸ್ಕೃತಿ ರಬ್ಬರಿನಂತೆ ಹೇಗೆ ಬೇಕೋ ಹಾಗೆ ಎಳೆದು ಕೊಳ್ಳಲು ಸಾಧ್ಯವಿದೆ. ಹೆಚ್ಚು ಸಂತಾನ ಪಡೆಯುವವರು ಮಹಾ ಭಾಗ್ಯವಂತರು—ಎನುವ ಭಾವನೆ ಬಹಳ ಮಟ್ಟಿಗೆ ಇಂದು ದೂರಾಗಿರುತ್ತದೆ.

ಹೀಗಾಗಿರುವದಕ್ಕೆ ಸರಕಾರದ ಪ್ರಚಾರ ವೈಖರಿ ಅಥವಾ ಇತರ ವೈಜ್ಞಾನಿಕ ಕೃತ್ರಿಮ ಸೌಲಭ್ಯಗಳು ಮಾತ್ರ ಕಾರಣವಲ್ಲ.

### ಪರಿಸ್ಥಿತಿಯಿಂದ ಬಂದ ಜ್ಞಾನ

ಇಂದು ಕುಟುಂಬದ ರಕ್ಷಣೆ ಹಾಗೂ ಪೋಷಣೆಯ ಸಮಸ್ಯೆ ದೊಡ್ಡದಾಗಿದೆ. ಆರ್ಥಿಕ ಪ್ರಶ್ನೆ ಎಲ್ಲದಕ್ಕೂ ಮೂಲವಾಗಿದೆ. ಪ್ರತಿಯೊಂದು ಜೀವನಾವಶ್ಯಕ ವಸ್ತುಗಳ ಬೆಲೆಯು ಗಗನ ಮುಟ್ಟುತ್ತಿರುವಾಗ ಮತ್ತು ಕಲಿತಂಥ ತರುಣರಿಗೆ ನೌಕರಿ ಸಿಗುತ್ತದೆನುವ ಭರವಸೆ ಇಲ್ಲದಾಗಿರುವಾಗ ಮಿತ ಸಂತತಿಯ ಅವಶ್ಯಕತೆಯ ಕುರಿತು ಜನರಲ್ಲಿಯೇ ಜಾಗೃತ ಭಾವನೆ ಉಂಟಾಗಿದೆ. ಸರಕಾರ ವೈಜ್ಞಾನಿಕವಾಗಿ ಕುಟುಂಬ ಯೋಜನೆಯನ್ನು ಜಾರಿಗೆ ತಂದುದರಿಂದ ಆಗುವ ಪ್ರತಿಕ್ರಿಯೆಗಳಿಗಿಂತಲೂ ಜನಕ್ಕೆ ಕಳೆದ ೭೦ ವರ್ಷಗಳಿಂದ ತಂದೊಡ್ಡಿರುವ ಆರ್ಥಿಕ ಅಡಚಣೆಯಿಂದಾಗಿ ವಿಧಿವಿಲ್ಲದೆ ಉಂಟಾಗಿರುವ ಪ್ರತಿಕ್ರಿಯೆ ಹೆಚ್ಚಿನದ್ದಾಗಿರುತ್ತದೆ.

ಇಂದು ಜನ ಮಿತ ಸಂತತಿ ಅವಶ್ಯವೆಂದು ಭಾವಿಸಿರುವದಾದರೆ ಅದು ಪರಿಸ್ಥಿತಿಯ ಒತ್ತಡದಿಂದ ಬಂದಿರುವ ಜ್ಞಾನವೆಂದೇ ಹೇಳಬೇಕು. ಅಂತಲೇ ಕುಟುಂಬ ಯೋಜನೆಯು ಇಂದು ಹಿಂದಿಗಿಂತ ಹೆಚ್ಚು ಜನಪ್ರಿಯವಾಗಿವೆ. ಇಲ್ಲದೆ ಇದು ಅವಶ್ಯವೆಂದು ತೋರಿದೆ.

### ಇದೊಂದು ಸಾಮಾಜಿಕ ಸಮಸ್ಯೆ

ಕುಟುಂಬ ಯೋಜನೆ ಇಂದು ಯಾರಿಗೆ ಅವಶ್ಯವೆನ್ನುವ ವಿಚಾರದಲ್ಲಿ ಭಿನ್ನಾಭಿಪ್ರಾಯವಿದೆ. ಮನೆಯಲ್ಲಿ ಎಲ್ಲ ಸೌಕರ್ಯ ವಿದ್ದವರಿಗೆ ಎಷ್ಟು ಮಕ್ಕಳಾದರೂ ಚಿಂತಿಲ್ಲ--ಸಂಸಾರವನ್ನು ನಡೆಸಿಕೊಂಡು ಹೋಗಲಾರದ ಬಡ ಕುಟುಂಬಗಳಲ್ಲಿ ಮಿತ ಸಂತತಿ ತೀರ ಅವಶ್ಯವೆಂದು ಹಲವರ ಅಭಿಪ್ರಾಯವಿದೆ. ಸಂಸಾರ ಪೋಷಣೆಯ ವಿಷಯದಲ್ಲಿ ಕುಟುಂಬದ ಆರ್ಥಿಕ ಶಕ್ತಿಯ ಮೇಲೆಯೇ ಈ ಕುಟುಂಬ ಯೋಜನೆ ಅವಲಂಬಿಸಿದೆಂದು ಅಂಥವರು ಭಾವಿಸುವ ಹಾಗೆ ತೋರುತ್ತದೆ. ಒಂದು ಕುಟುಂಬದ ಸಮಸ್ಯೆಯನ್ನೇ ನಾವು ಆಧಾರವಿಟ್ಟುಕೊಳ್ಳುವದೂ ಸರಿಯಲ್ಲ. ಇದನ್ನು ಹೇಗೆ ತಡೆಗಟ್ಟಬಹುದು-ಎನ್ನುವದನ್ನೂ ನಾವು ಪರಿಶೀಲಿಸಬೇಕಾಗಿದೆ. ಹುಟ್ಟುವ ಮಕ್ಕಳ ಉದರ ಪೋಷಣೆ, ವಿದ್ಯಾಭ್ಯಾಸ, ಆರೋಗ್ಯ ಮತ್ತು ವಸತಿ ಎಲ್ಲವನ್ನೂ ನಾವು ಪರಿಶೀಲಿಸಬೇಕಾಗಿದೆ. ವಿಪುಲವಾಗಿ ಬೆಳೆಯುತ್ತಿರುವ ಜನಸಂಖ್ಯೆಯಿಂದ ಮೇಲಿನ ಈ ಸಮಸ್ಯೆಗಳು ದಿನದಿಂದ ದಿನಕ್ಕೆ ಬೃಹದಾಕಾರವಾಗಿ ಬೆಳೆಯುತ್ತಲಿದೆ. ಇದು ರಾಷ್ಟ್ರಕ್ಕೆ ಸಂಬಂಧಿಸಿರುವ ಪ್ರಶ್ನೆಯಾಗಿರುತ್ತದೆ. ಈ ಸಮಸ್ಯೆಯನ್ನು ಬಗೆಹರಿಸುವಲ್ಲಿ ಪ್ರತಿಯೊಬ್ಬ ಪ್ರಜೆಯೂ ತನ್ನ ಪಾಲಿನ ಹೊಣೆಗಾರಿಕೆಯನ್ನು ನಿರ್ವಹಿಸಬೇಕಾಗಿರುತ್ತದೆ. ಸರಕಾರದ ಸಮಸ್ಯೆ ಪ್ರಜಾಜನರ ಸಮಸ್ಯೆ ಎಂದು ತಿಳಿದುಕೊಂಡಾಗಲೇ ಈ ಸಮಸ್ಯೆ ಬಗೆಹರಿಯುವದು ಸಾಧ್ಯ.

### ಇದರಲ್ಲಿ ಧರ್ಮ ಹಾಗೂ ಪ್ರತ್ಯೇಕತಾ ಧೋರಣೆ

ಇಂಥ ರಾಷ್ಟ್ರೀಯ ಸಮಸ್ಯೆಯನ್ನು ಎದುರಿಸುವಲ್ಲಿ ಪ್ರತಿಯೊಬ್ಬ ಪ್ರಜೆಯೂ ತನ್ನ ಪಾಲಿನ ಹೊಣೆಯನ್ನು ಸಲ್ಲಿಸಬೇಕು. ಆದರೆ ದುರ್ದೈವದಿಂದ ಇದರಲ್ಲಿ ಹಲವರು ಧರ್ಮ ಭಾವನೆಯನ್ನು ಮುಂದೆ ತರುತ್ತಲಿದ್ದಾರೆ. ಪ್ರತ್ಯೇಕತಾ ಧೋರಣೆಯನ್ನು ವ್ಯಕ್ತಪಡಿಸುತ್ತಲಿದ್ದಾರೆ. ಕುಟುಂಬ ಯೋಜನೆಯನ್ನು ಕಾರ್ಯಾಚರಣೆಗೆ ತರುವಲ್ಲಿ ಸರಕಾರ ಹೇರಳ ಹಣ ವಿನಿಯೋಗ ಮಾಡುತ್ತಿದೆಯಾದರೂ ಇದನ್ನು ಕಡ್ಡಾಯವಾಗಿ ಜನರ ಮೇಲೆ ಹೇರುತ್ತಿಲ್ಲ. ಆದರೆ ರಾಷ್ಟ್ರೀಯ ಸಮಸ್ಯೆ ಇದಾಗಿರುವ ಪ್ರಯುಕ್ತ ಯಾರೂ ಪ್ರತ್ಯೇಕತಾ ಭಾವನೆಯನ್ನು ತಳೆದರೆ ಇಲ್ಲವೆ ಧರ್ಮವನ್ನು ಮುಂದೆ ತರುವದಾದರೆ ಅಂಥ ಜನರು ರಾಷ್ಟ್ರೀಯರಲ್ಲದ ಅರಾಷ್ಟ್ರೀಯವಾದ ಹೆಜ್ಜೆ ಇಡುತ್ತಲಿದ್ದಾರೆಂದು ವಿಷಾದದಿಂದ ಹೇಳಬೇಕಾಗುತ್ತದೆ.

ನಾವು ಜಾತ್ಯಾತೀತರು ಎಂದು ಘೋಷಿಸಿದ ಮೇಲೆ ಸಾಮಾಜಿಕ ಸಮಸ್ಯೆ ಎಲ್ಲರಿಗೂ ಅನ್ವಯವಾಗುತ್ತದ. ರಾಷ್ಟ್ರೀಯ ಸಮಸ್ಯೆಯನ್ನು ಎದುರಿಸುವ ಹೊಣೆಗಾರಿಕೆ ಎಲ್ಲರ ಮೇಲೆ ಬೀಳುತ್ತದೆ. ರಾಷ್ಟ್ರೀಯ ಸಮಸ್ಯೆಯನ್ನು ಬಗೆಹರಿಸುವಲ್ಲಿ ಅಲ್ಪ ಸಂಖ್ಯಾತರು ಬಹು ಸಂಖ್ಯಾಕರು ಎನ್ನುವ ತಾರತಮ್ಯವೂ ಇರಬಾರದು. ಅಲ್ಪ ಸಂಖ್ಯಾಕರ ಬಗ್ಗೆ ಜಾತ್ಯಾತೀತ ಸರಕಾರ ಹಾಗೂ ಬಹು ಸಂಖ್ಯಾಕರು ಉದಾರವಾಗಿ ವರ್ತಿಸುತ್ತಿರುವ ವೇಳೆ ಅಲ್ಪ ಸಂಖ್ಯಾಕರು ಅದರ ದುರುಪಯೋಗ ಗೊಳಿಸುವದಕ್ಕೆ ಯತ್ನಿಸಬಾರದು. ಹೀಗೆ ಮಾಡಿದರೆ ಅವರು ರಾಷ್ಟ್ರೀಯತಾ ಮನೋಭಾವನೆಯಲ್ಲಿ ಮತ್ತು ದೇಶನಿಷ್ಠೆಯಲ್ಲಿ ವಿರಹಿತರು ಎಂದ ಹಾಗಾಗುತ್ತದ.

ನಮ್ಮಲ್ಲಿಯ ಅಲ್ಪ ಸಂಖ್ಯಾಕರ ಜೆಸರಿನಲ್ಲಿರುವ ಎರಡು ಪಂಗಡಗಳು ಕುಟುಂಬ ಯೋಜನೆ ಇಲ್ಲವೆ ಸಂತತಿ ನಿಯಂತ್ರಣವನ್ನು ಧಾರ್ಮಿಕ ತಳಹದಿಯ ಮೂಲಕ ನಿಷೇಧಿಸುತ್ತದೆ. ಈ ರೀತಿಯ ಪ್ರತ್ಯೇಕತಾ ಧೋರಣೆಯನ್ನು ವಹಿಸಿದ್ದರಿಂದ ಅನೇಕರಲ್ಲಿ ಒಂದು ರೀತಿಯ ತಪ್ಪು ಭಾವನೆ ಅವಕಾಶವನ್ನು ಕಲ್ಪಿಸಿ ಕೊಟ್ಟಂತಾಗಿದೆ. ವೇದಿಕೆಯ ಮೇಲೆ ನಿಂತು ಮಾತನಾಡತಕ್ಕವರು ಈ ಕಟು ಸತ್ಯವನ್ನು ಹೇಳುತ್ತಿಲ್ಲ. ಈ ಪಕ್ಷಪಾತಕ್ಕೆ ಸಮರ್ಪಕವಾದ ಉತ್ತರ ಹೇಳುದರ ಬದಲು 'ರಾಜಕೀಯ' ಎಂದು ಟೀಕಿಸುತ್ತಾರೆ. ಎಲ್ಲರನ್ನೂ ಒಲಿಸುವ ಭರಾಟಿಯಲ್ಲಿ ಒಂದು ವರ್ಗದ ಪೋಷಣೆ ಇನ್ನೊಂದು ವರ್ಗದ ಶೋಷಣೆ ಆಗುತ್ತಿರುವದರ ಬಗೆಗೆ ಅವರು ಹೇಳುತ್ತಿಲ್ಲ. ಈ ರೀತಿಯ ಸಾರ್ವಜನಿಕ ವಂಚನೆ ಮತ್ತು ಅರಾಷ್ಟ್ರೀಯ ಪ್ರವೃತ್ತಿ ರಾಜಕೀಯವಲ್ಲವೆ? ಎಂದು ನಾವು ಪ್ರಶ್ನಿಸುತ್ತೇವೆ. ತಪ್ಪು ಎಲ್ಲಿದ್ದರೂ ಅದು ಯಾರಿಂದ ನಡೆದರೂ ತಪ್ಪೇ ಆಗುತ್ತದೆ. ಅದನ್ನು ಸಕಾಲದಲ್ಲಿ ಹೇಳಿ ಎಚ್ಚರಿಸುವದು ಹೊಣೆಗಾರ ಸ್ಥಾನದಲ್ಲಿರುವವರ ಕರ್ತವ್ಯವಾಗಿದೆ.

ಈ ಪ್ರತ್ಯೇಕತಾ ಧೋರಣೆ ಮತ್ತು ಧಾರ್ಮಿಕ ನಿಷೇಧ ಇಂದು ಕುಟುಂಬ ಯೋಜನಾ ಕಾರ್ಯಾಚರಣೆಯಲ್ಲಿರುವ ಒಂದು ಪ್ರಬಲ ಆತಂಕವಾಗಿರುವ ಪ್ರಯುಕ್ತ ಈ ಸಂಗತಿಯನ್ನು ನಾವು ಉಲ್ಲೇಖಿಸಬೇಕಾಯಿತು.

### ಚರಿತ್ರ ಶುದ್ಧ ಇರುವವರು ಜನರ ಮನಸ್ಸನ್ನು ಗೆಲ್ಲಬೇಕು

ಸಂತತಿ ನಿಯಂತ್ರಣಕ್ಕಾಗಿ ಇರುವ ಅನೇಕ ವೈಜ್ಞಾನಿಕ ಸೌಲಭ್ಯಗಳ ಉಪಯೋಗ-ಮತ್ತು ಸಂತತಿನಿಯಂತ್ರಣದಿಂದ ಸುಖೀ ಸಂಸಾರಕ್ಕೆ ಹೇಗೆ ಕಾರಣವಾಗುತ್ತದೆನ್ನುವದನ್ನು ಜನಕ್ಕೆ ತಿಳಿ ಹೇಳುವ ಹೊಣೆ ಬಹು ಮುಖ್ಯವಾಗಿರುತ್ತದೆ. ವೇದಿಕೆಯ ಮೇಲಿನ ಇಂಗ್ಲಿಷ್ ಭಾಷಣದಿಂದಾಗಲೀ ಗ್ರಾಮಾಂತರಪ್ರದೇಶಗಳಲ್ಲಿ ಬಣ್ಣದ ಚಿಟ್ಟಿಗಳನ್ನು ತೂಗಾಡಿಸುವದರಿಂದಾಗಲೀ ಜನ ಈ ಕಡೆಗೆ ಒಲಿಯುವಂತಿಲ್ಲ. ನಾವಿನ್ನೂ ಅಸಂಬದ್ಧ ಆಡಂಬರವನ್ನು ತ್ಯಜಿಸಲು ಸಿದ್ಧರಿಲ್ಲ. ಪ್ರಾಮಾಣಿಕ ಪ್ರಯತ್ನಕ್ಕಿಂತಲೂ ಪ್ರಚಾರಕ್ಕಾಗಿ ಹೆಚ್ಚು ಪ್ರಾಶಸ್ತ್ಯ ಕೊಡುತ್ತಲಿದ್ದೇವೆ. ಈ ಯೋಜನೆಯ ಸಫಲ್ಯತೆ ಮಿತ ಸಂತತಿಯ ಅವಶ್ಯಕತೆಯನ್ನು ಜನತೆಯಲ್ಲಿ ಪ್ರತಿಬಿಂಬಿಸುವದಕ್ಕೆ ಸಮರ್ಥರಾಗಿರ ತಕ್ಕವರನ್ನು ನಾವು ನೋ.

(ಹತ್ತನೇ ಪುಟ ನೋಡಿ)




[ಈ ಸ್ಥಿರಶೀರ್ಷಿಕೆಯಡಿಯಲ್ಲಿ ಬರುವಂಥಹ ಪತ್ರದ ಅಭಿಪ್ರಾಯಗಳು ರಾಯಭಾರಿಯ ಅಭಿಪ್ರಾಯವಾಗಬೇಕೆಂದಿಲ್ಲ. ಪತ್ರವನ್ನು ಬರೆಯತಕ್ಕವರು ತಮ್ಮ ಹೆಸರು ವಿಳಾಸನ್ನು ಸ್ಪಷ್ಟವಾಗಿ ನಮೂದಿಸಬೇಕು. ಹೆಸರು ವಿಳಾಸವಿಲ್ಲದಪತ್ರಗಳ ಕಡೆಗೆ ನಾವುಸರ್ವಥಾ ಗಮನಹರಿಯಲಾರೆವು. —ಸಂ]

## ತಮ್ಮ ಲೇಖನ್ಕ ಚಾಗ್ಲಾರೆ ತಪ್ಪಲ್ಲವೆ?

ಪ್ರಿಯ ರಾಯಭಾರಿಯೆ,

ತಾವು ಕಳೆದ ರಾಯಭಾರಿಯ ಮುಖ ಪುಟದಲ್ಲಿ ಕೇಂದ್ರ ಸಚಿವ ಶ್ರೀ ಎಂ. ಸಿ ಚಾಗ್ಲಾರವರ ಕುರಿತು ಪ್ರಕಟಿಸಿರುವ ಲೇಖನವನ್ನ ಓದಿದೆ. ತಾವು ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು ನಾನು ಒಪ್ಪುತ್ತೇನೆ. ಆದರೆ ಆ ಲೇಖನದಲ್ಲಿ "ಭಾರತದ ಮುಸ್ಲಿಮರಲ್ಲಿ ನೂರಕ್ಕೆ ನೂರು ಭಾರತೀಯನಾಗಿರುವ ಏಕಮಾತ್ರ ಮುಸ್ಲಿಮನೆಂದರೆ ಶ್ರೀ ಎಂ. ಸಿ. ಚಾಗ್ಲಾ" ಎಂದು ಬರೆದಿರುವ ಮಾತು ಮಾತ್ರ ಅಷ್ಟೊಂದು ಸಮಂಜಸವಲ್ಲ. ಭಾರತದಲ್ಲಿರುವ ಮುಸ್ಲಿಮರಲ್ಲಿ ಹಲವರು ಪಾಕಿಸ್ತಾನೀ ಪರ ಮನೋಭಾವದವರಾಗಿದ್ದರೂ ಶುದ್ಧ ಭಾರತೀಯ ಮನೋಭಾವದ ಅನೇಕ ಜನ ಮುಸಲ್ಮಾನರು ಇದ್ದಾರೆನ್ನುವದನ್ನು ನಾವು ಅಲ್ಲಗಳೆಯಲು ಸಾಧ್ಯವಿಲ್ಲ. ಮಾತ್ರವಲ್ಲ ಎಷ್ಟೋ ಜನ ಮಹಮ್ಮದೀಯರು ಈ ರಾಜಕೀಯದ ಅನುಭವವಿಲ್ಲದಂಥವರಾಗಿದ್ದು ಅವರು ಭಾರತ ನಮ್ಮ ರಾಷ್ಟ್ರ ಎನುವದು ಮಾತ್ರ ಅವರಿಗೆ ತಿಳಿದಿದೆ. ಮುಸಲ್ಮಾನರಲ್ಲಿ ಪಾಕಿಸ್ತಾನೀ ಮನೋಭಾವದವರಿದ್ದ ಹಾಗೆಯೇ ಇತರ ಮತೀಯರಲ್ಲಿ ಅನ್ಯ ದೇಶದ ಮೇಲಿನ ಮೋಹ ಹೊಂದಿಕೊಂಡ ಇತರರೂ ಇರಬಹುದು, ಆದುದರಿಂದ ಚಾಗ್ಲಾರವರ ಮಟ್ಟಿಗೆ ತಾವು ವ್ಯಕ್ತಪಡಿಸಿರುವ ಅಭಿಪ್ರಾಯ ನೂರಕ್ಕೆ ನೂರು ಪಾಲು ಸತ್ಯವಾಗಿರುವದಾದರೂ ಇತರೇ ಮುಸಲ್ಮಾನ ಬಂಧುಗಳ ವಿಷಯದಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯ ನೂರಕ್ಕೆ ನೂರುಪಾಲೂ ಸಮರ್ಪಕವಲ್ಲವೆಂದು ಹೇಳುತ್ತೇನೆ.

ಬಿ. ಹಸ್ಸನ್ ಸಾಹೇಬ
ಮಂಗಳೂರು.

## ನಾವು ಸಮಸ್ಯೆಗಳನ್ನು ಬೇಕೆಂತಲೇ ನಿರ್ಮಿಸುತ್ತಲಿದ್ದೇವೆ

ಅಯ್ಯಾ ರಾಯಭಾರಿಯೇ,

ಕಮ್ಯುನಿಸ್ಟ್ ಚಿನಾ ಹಾಗೂ ಪಾಕಿಸ್ತಾನಗಳು ಭಾರತದ ವಿರುದ್ಧ ಸಂಯುಕ್ತ ಹೋರಾಟ ನಡೆಲು ಸರ್ವರೀತಿಯ ಸನ್ನಾಹ ನಡೆಸುತ್ತಿರುವ ವೇಳೆ ನಾವು ಶಿಕ್ಷಣ ಮಾಧ್ಯಮದ ಗಡಿ ಪ್ರಶ್ನೆಗಳನ್ನು ಇದೇ ಸಂದರ್ಭದಲ್ಲಿ ಎತ್ತಿಕೊಂಡು ದೇಶದೊಳಗೆ ಅಶಾಂತಿ ಕಳವಳ ಕಾರಿಕ ಪರಿಸ್ಥಿತಿಯನ್ನು ನಿರ್ಮಿಸಿಕೊಳ್ಳುತ್ತಿರುವದು ವಿಷಾದಕರವಾದ ಸಂಗತಿ. ಹೊಣೆಗಾರ ಸ್ಥಾನದಲ್ಲಿರತಕ್ಕವರಲ್ಲಿಯೇ ದೇಶದ ಭದ್ರತೆ ಹಾಗೂ ಸುರಕ್ಷಿತತೆಯ ಬಗ್ಗೆ ಕಳಕಳಿಯ ಭಾವನೆಯಿಲ್ಲ. ಎನ್ನುವದು ಇದರಿಂದ ವ್ಯಕ್ತವಾಗದೆ?

ಬಿ. ಅನಂತಕೃಷ್ಣ ಶರ್ಮಾ.
ಉಳ್ಳಾಲಂ.

## ಎಲ್ಲರನ್ನೂ ಒಂದೇ ತಕ್ಕಡಿಯಲ್ಲಿ ತೂಗಬಾರದು

ಪ್ರಿಯ ರಾಯಭಾರಿಯೇ

ಈಚೀಚಿನ ರಾಯಭಾರಿ ಸಂಚಿಕೆಗಳಲ್ಲಿ ಉಡುಪಿಯಲ್ಲಿ ಹೊಸತಾಗಿ ನಿರ್ಮಾಣಗೊಂಡ ಉಡುಪಿ ಬ್ಲೋಕ್ ಕಾಂಗ್ರೆಸಿನ ಬಗೆಗೆ ಮೇಲಿಂದ ಮೇಲೆ ಏಕ ಪ್ರಕಾರ ಟೀಕೆ ಬರುತ್ತಲಿದೆ. ವೈಯಕ್ತಿಕವಾಗಿ ಕಾಂಗ್ರೆಸಗೆ ಸೇರಿದವರು ಕಲವು ರೀತಿಯ ಧೋರಣೆಯನ್ನು ವಹಿಸಿದರೆ ಉಡುಪಿ ಕಾಂಗ್ರೆಸೇ ಕೆಟ್ಟದೆಂದು ಟೀಕೆ ಮಾಡುವದು ಸರಿಯಲ್ಲ. ಇಂಥ ವೈಯುಕ್ತಿಕ ಧೋರಣೆಯಿಂದ ನಡೆಯತಕ್ಕ ಮನೋಭಾವದವರು ಎಲ್ಲ ಪಕ್ಷಗಳಲ್ಲೂ ಇರಬಹುದಲ್ಲವೇ ?

ಓರ್ವ ಕಾಂಗ್ರೆಸಿಗ.

[ಕಾಂಗ್ರೆಸಿನಹೆಸರಿನಲ್ಲಿ ಇಂಥ ವ್ಯಕ್ತಿಗಳು ಸಾರ್ವಜನಿಕಕ್ಕೆ ಸಂಬಂಧಿಸಿರುವ ವಿಷಯಗಳಲ್ಲಿ ತಮ್ಮ ವೈಯಕ್ತಿಕ ದ್ವೇಷ ಕಾರಕ ಧೋರಣೆಯನ್ನು ಪ್ರಯೋಗಿಸಿದರೆ ಅದು ಸಂಸ್ಥೆಗೂ ಸಂಸ್ಥೆಯಲ್ಲಿರತಕ್ಕ ಇತರರಿಗೂ ಅನ್ಯಾಯವಾಗುವದಿಲ್ಲವೇ? ಉಡುಪಿ ಕಾಂಗ್ರೆಸಿನಲ್ಲಿ ಅನೇಕ ಸಜ್ಜನರು ಇದ್ದಾರೆನ್ನುವದನ್ನು ನಾವೂ ಒಪ್ಪುತ್ತೇನೆ. ಕಾಂಗ್ರೆಸಿನ ಬಲವನ್ನು ಸ್ವಂತ ಹಿತ ಸಾಧನಗೆ ಬಳಸಿದ್ದರಿಂದ ಸಾಮೂಹಿಕ ಟೀಕೆಗೆ ಅವಕಾಶವಾಯಿತು—ಸಂ.]

## ಮುರ್ತೆದಾರರ ಸಂಕಷ್ಟ ನಿವಾರಣೆಗೆ ಸರಕಾರವೆ ನೆರವಾಗಬೇಕು

ಈ ಜಿಲ್ಲೆಯ ಸಾವಿರಾರು ಮುರ್ತೆದಾರರು ಮದ್ಯಪಾನ ನಿಷೇದ ಕಾಯಿದೆಯಿಂದ ತಮ್ಮ ಕಸಬನ್ನು ಕಳೆದುಕೊಂಡು ನಿರ್ಗತಿಕರಾಗಿರುತ್ತಾರೆ. ಈಗ ಮೈಸೂರು ಸರಕಾರ ಅಕ್ಟೋಬರ ತಾ. 1ರಿಂದ ಮದ್ಯಪಾನ ನಿಷೇಧ ಕಾಯಿದೆಯನ್ನು ಈಜಿಲ್ಲೆಯಿಂದ ತೆಗೆದು ಹಾಕುತ್ತಾರೆ. ಅಲ್ಲಲ್ಲಿ ಗಡಂಗುಗಳನ್ನು ತೆರೆಯಲು ಅವಕಾಶ ಕೊಡುತ್ತದೆಂದು ತಿಳಿಯುತ್ತದೆ. ಈ ಸಂದರ್ಭದಲ್ಲಿ ಈ ಕಸುಬನ್ನೇ ಮೊದಲು ಅನುಸರಿಸಿಕೊಂಡು ಬಂದಿರುವ ಮುರ್ತೆದಾರರಿಗೇನೇ ವಹಿಸಿ ಕೊಡುವದು ಸೂಕ್ತವಲ್ಲವೇ?

ಕಾಂಗ್ರೆಸ್ ಸರಕಾರ ನೀತಿ ಭ್ರಷ್ಟವಾದರೂ ಈ ಮೂಲಕ ನ್ಯಾಯ ಪಕ್ಷಪಾತಿ ಎನಿಸಿಕೊಳ್ಳ ಬಾರದೆ ?

ತನಿಯಪ್ಪ ಸುವರ್ಣ. ಕೆಮ್ಮಣ್ಣು

# ಸತ್ಯವೇ ದೇವರು

(ಮಹಾತ್ಮಾ ಗಾಂಧಿಯವರು ಅಂಗ್ಲಭಾಷೆಯಲ್ಲಿ ಬರೆದುದು)

(ಅನುವಾದಕ: —ಎಮ್ ಬಿ. ಶಂಕರ ರಾವ್, ಐ. ಎ. ಎಸ್. ನಿವೃತ್ತ)

ಅಧ್ಯಾಯ: ೩೦

## ದೇವಸ್ಥಾನಗಳು ಮತ್ತು ಮೂರ್ತಿಗಳು

ಗೀತೆಯನ್ನು ನಾನು ಪ್ರಥಮತಃ ಕ್ರಿ.ಶ. 1889ನೇ ವರುಷ ಓದಿದೆನು. ಅದು ಆಗ ವಿಶೇಷವಾದ ಗ್ರಂಥವೆಂದು ನಾನು ತಿಳಿಯಲಿಲ್ಲ. ಅದು ಸಾಧಾರಣ ಚರಿತವೆಂದು ಭಾವಿಸಿದೆನು. ಅನಂತರ ಗೀತೆಯನ್ನು ಬಹಳ ಜಾಗ್ರತೆಯಿಂದ ಓದಲಾರಂಭಿಸಿದೆನು. ಆಗ ಅದರ ರುಚಿಯು ನನಗೆ ತಿಳಿಯುತ್ತ ಬಂತು. ಅದು ಮಹಾಭಾರತದ ಒಂದು ಅಂಶವಾದುದರಿಂದ ಮಹಾಭಾರತವನ್ನು ಓದಿ ತಿಳಿದೆನು. ಗೀತೆಯು ಮಹಾ ಭಾರತದ ತಿರುಳೆಂದು ಅರಿತುಕೊಂಡೆನು, ಮಹಾಭಾರತವನ್ನು ಜಾಗ್ರತೆಯಿಂದ ಅರಿತರೆ ಅದರಲ್ಲಿ ಗೆದ್ದವರು ಯಾರೂ ಇಲ್ಲ. ಕೌರವರು ಎಲ್ಲರೂ ಯುದ್ಧದಲ್ಲಿ ಮಡಿದರೂ ಪಾಂಡವರು ಐವರು, ದ್ರೌಪದಿ, ಕುಂತಿಯನ್ನುಳಿದು ಪಾಂಡವರ ಬಲವೆಲ್ಲ ನಾಶವಾಗಿಯದೆ. ಮಾತ್ರವಲ್ಲ ಪಾಂಡರ ಪುತ್ರರೂ ನಾಶವಾಗಿದ್ದಾರೆ. ಮಹಾ ಭಾರತವು ಶೋಕದ ಕತೆಯು. ಅದನ್ನು ಓದಿದಾಗ ಕಣ್ಣೀರು ಸುರಿಯುತ್ತದೆ. ಇಡೀ ಮಹಾಭಾರತದಲ್ಲಿ ಗೀತೆಯುಮಾತ್ರ ಮಹತ್ತರವಾದ ಭಾಗವು. ಗೀತೆಯ ದ್ವಿತೀಯ ಅಧ್ಯಾಯವು ಪರಿಶುದ್ಧ ಮಾನವನು ಹೇಗೆ ವರ್ತಿಸಬೇಕೆಂದು ಕೂಲಂಕಶವಾಗಿ ವಿವರಿಸುತ್ತದೆ. ಯುದ್ಧದ ವಿವರಣೆಯು ಅದರಲ್ಲಿ ಅಧಿಕ ವಾಗಿಲ್ಲ.

ಗೀತೆಯು ಶ್ರೀ ಕೃಷ್ಣನು ಸಂಪೂರ್ಣ ಬ್ರಹ್ಮಜ್ಞನು. ಅವನೆ ಸಂಪೂರ್ಣಜ್ಞಾನಿಯು. ಅವನನ್ನು ಹಿಂದುಗಳು ಅವತಾರ ಪುರುಷನೆನ್ನುವರು. ಅವನನ್ನು ಪೂಜಿಸದ ಹಿಂದುವೇ ಇಲ್ಲ. ಅವನು ಹೇಳುವ ಮಾತುಗಳಲ್ಲಿ ಸತ್ಯವು ಪ್ರಕಾಶಿಸುತ್ತದೆ. ಅವನನ್ನು ಸತ್ಯಪ್ರಕಾಶನನ್ನಬಹುದು, ಅತನಲ್ಲಿ ಕುಂದು ಹೊಕ್ಕವರಲ್ಲ ಅತನು ವಾಸಮಾಡುವನು ಎಲ್ಲಾ ಅವತಾರಗಳಿಂದಲೂ ಹಿರಿದಾದುದು ಕೃಷ್ಣಾವತಾರವು. ಅದನ್ನು ಸಮಸ್ತ ಹಿಂದುಗಳೂ ಒಪ್ಪುವರು. ಮುಕ್ತಿಯನ್ನು ಅಪೇಕ್ಷಿಸದ ಮನುಷ್ಯನು ಮನುಷ್ಯನಲ್ಲ. ಆದರ ಒಂದು ಕೋಟಿ ಜನರಲ್ಲಿ ಒಬ್ಬನು ಮಾತ್ರ ಮುಕ್ತಿ ಸಾಧನದಲ್ಲಿ ಗೆಲ್ಲುತ್ತಾನೆ. ಮುಕ್ತಿ ಸಾಧನೆಗೆ ಹಲವು ಜನ್ಮಗಳ ಸಂಸ್ಕೃತಿಯು ಒಟ್ಟುಗೂಡಬೇಕು. ಆದರೆ ಈ ಸಾಧನವನ್ನು ಪ್ರತಿಯೊಬ್ಬನೂ ಮಾಡಬೇಕು. ಗೀತೆಯು ಈ ಸಾಧನದ ವಿಧ ವಿಧವಾದ ಉಪಾಯಗಳನ್ನು ಸೂಚಿಸುವುದು. ಗೀತೆಯು ವಿಶೇಷ ದೊಡ್ಡ ಗ್ರಂಥವಲ್ಲ. ಅದನ್ನು ಶ್ರದ್ಧೆಯುಳ್ಳವರು ಬಾಯಿಪಾಠ ಮಾಡಬಹುದು.

ನಿಷ್ಕಾಮ ಕರ್ಮವೇ ಗೀತೆಯು ಪ್ರತಿಯೊಂದು ಅಧ್ಯಾಯದ ಮುಖ್ಯ ತಿರುಳು. ಫಲಾಪೇಕ್ಷೆಯಿಲ್ಲದೇಮಾಡುವ ಕರ್ಮಗಳೇ ನಿಷ್ಕಾಮ ಕರ್ಮಗಳೆನಿಸುವವು. ಸಂಪೂರ್ಣ ಜ್ಞಾನಿಯಾಗದೆ ನಿಷ್ಕಾಮ ಕರ್ಮಗಳನ್ನು ಮಾಡುವುದು ಬಹುಕಷ್ಟ. ಕರ್ಮಯೋಗಕ್ಕೆ ವೈಶಿಷ್ಟ್ಯವು ಗೀತೆಯಲ್ಲಿ ಬಂದಿದೆ. ಕರ್ಮವನ್ನು ಮಾಡಬೇಕೆಂದು ಶ್ರೀ ಕೃಷ್ಣನು ಅರ್ಜುನನಿಗೆ ಗೀತೆಯಲ್ಲಿ ಸಾರಿ ಸಾರಿ ಹೇಳಿರುವನು. ಬರಿ ಜ್ಞಾನದಿಂದ ಏನೂ ಆಗದು—ಕರ್ಮಗಳು ಸಾರಾಗವಾಗಿ ನಡೆಯತಕ್ಕದ್ದೆಂಬುದು ಶ್ರೀ ಕೃಷ್ಣನಿಂದ ಪಾರ್ಥನಿಗೆ ತಿಳಿಯಬಂತು. ಮಾಡಿರುವ ಕರ್ಮಗಳನ್ನು ಪರಮಾತ್ಮನಿಗೆ ಅರ್ಪಿಸಿದರೆ, ಅವುಗಳ ಫಲವನ್ನು ಎಣಿಸದಿದ್ದರೆ. ಆ ಕರ್ಮಗಳು ನ್ಯಾಯವಾಗಿ ನಿಷ್ಕಾಮ ಕರ್ಮಗಳಾಗುವವು. ಅಂತಹ ಕರ್ಮಗಳಿಲ್ಲದೆ ಸೃಷ್ಟಿಯೇ ಮುಂದುವರಿಯದು. ಸತ್ಯಕ್ಕೆ ಗೀತೆಯಲ್ಲಿ ಪ್ರಥಮ ಸ್ಥಾನವಿದೆ—ಮೋಕ್ಷ ಸಾಧನೆಯೇ ಗೀತೆಯ ಉದ್ದೇಶವು. ತನ್ನ ಆತ್ಮದ ಶಕ್ತಿಯನ್ನು ತಾನು ತಿಳಿಕೊಂಡವನು ಮಾತ್ರ ಗೀತೆಯ ಸರಿಯಾದ ಅರ್ಥವನ್ನು ಮಾಡಿ ಕೊಳ್ಳಲು ಸಾಧ್ಯವು. ಗೀತೆಯನ್ನು ಪಠನಮಾಡಿ.ಅದರ ಅರ್ಥವನ್ನು ಅರಿತರೆ ನಮಗೆ ಶಾಂತಿಯುಂಟಾಗವುದು. ಭಕ್ತಿ ಯೋಗಕ್ಕೂ ಗೀತೆಯಲ್ಲಿ ತುಂಬಾ ಪ್ರಾಶಸ್ತ್ಯವಿದೆ. ಭಕ್ತಿಯಲ್ಲಿ ಸಾತ್ವಿಕತನವೂ, ನಿರಹಂಕಾರವೂ ತುಂಬಿವೆ. ಭಕ್ತಿಮಾರ್ಗವು ಸುಲಭವಾದುದು. ಆ ಮಾರ್ಗವು ಅರ್ಜುನನಿಗೆ ಸುಲಭವೆಂದು ತೋರಿ ಅದನ್ನೆ ಆದರ್ಶವಾಗಿಟ್ಟುಕೊಂಡು ಶ್ರೀ ಕೃಷ್ಣನು ಹೇಳಿದಂತೆ ಯುದ್ಧರಂಗದಲ್ಲಿ ಕಾದಾಡಿದನು, ಬಂಧು ಮಿತ್ರ ಗುರು ಮಾಯೆಯನ್ನು ಬಹಿಸಿದನು. ಭಕ್ತಿ ಮಾರ್ಗದಲ್ಲಿ ವಿನಯತೆಯಿದೆ, ಸಾಮರ್ಥ್ಯವೂ ಇದೆ. ಭಕ್ತಿ ಮಾರ್ಗದಲ್ಲಿ ನಡೆದು ನಮ್ಮ ಕರ್ಮಗಳನ್ನು ಧೈರ್ಯದಿಂದ ಸಾಗಿಸಿದರೆ, ಉತ್ತಮವಾದ ಫಲವು ಲಭಿಸುವುದು. ಖಂಡಿತ. ಆದರೆ ಭಕ್ತಿ ಮಾರ್ಗದಲ್ಲಿ ನಡೆವವನು ತನ್ನ ಕರ್ಮಗಳ ಫಲಾಪೇಕ್ಷೆಯನ್ನು ಮಾಡದೇ, ತಾನು ಮಾಡಿದ ಕರ್ಮಗಳನ್ನು ಪರಮಾತ್ಮನ ಪಾದದಡಿ ಒಪ್ಪಿಸಬೇಕು. ನಿರ್ಮಲ ಚಿತ್ತದವನಿಗೆ ಮತ್ತು ಸತ್ಯ ಸಾಧನಿಗೆ ಮಾತ್ರ ಇದು ಸಾಧ್ಯವು. ಇತರರಿಗೆ ಸಾಧ್ಯವಲ್ಲ.

ತ್ಯಾಗವೆಂದರೆ ಕರ್ಮಗಳಿಂದ ಬಿಡುಗಡೆಯಾಗ ಬೇಕೆಂದಿಲ್ಲ. ಕರ್ಮಗಳ ಫಲವನ್ನು ಅಪೇಕ್ಷೆ ಮಾಡದಿರುವುದೆ ತ್ಯಾಗವೆಂದು ಗೀತೆಯು ಸಾರುತ್ತಿದೆ. ಆದು ಕಾರಣ ಕರ್ಮಗಳನ್ನು ಬಿಡುವುದು ತಪ್ಪು.

ಉಪಾಸಿಯಲ್ಲದವನಿಗೂ, ಭಕ್ತಿ ಇಲ್ಲದವನಿಗೂ, ಪರಮಾತ್ಮನನ್ನು ದೂರಿತವನಿಗೂ, ಹುಸಿಯನ್ನಾಡುವವನಿಗೂ ಗೀತೆಯನ್ನು ಉಪದೇಶಿಸ ಬೇಡಿ ಎಂದರು ಶ್ರೀ ಕೃಷ್ಣ ಪರಮಾತ್ಮನೇ ಹೇಳಿರುವನು.

# ರಾಯಭಾರಿ

RAYABHARI WEEKLY

ರಾಷ್ಟ್ರೀಯ ಕನ್ನಡ ವಾರಪತ್ರಿಕೆ

ಚಂದಾ ವಿವರ

ವರ್ಷಕ್ಕೆ ರೂ. 6 00

ಅರ್ಧವರ್ಷಕ್ಕೆ ರೂ 3 00

ಅಂಚೆ ವೆಚ್ಚ ಸೇರಿ

ಫೋನ್: 118

ಸಂಸ್ಥಾಪಕರು.
ಪಾಂಡಾಳ ಉಪೇಂದ್ರ ಶ್ರೀನಿವಾಸ ನಾಯಕ್

ಪ್ರಧಾನ ಸಂಪಾದಕರು:
ಪಾಂಡಾಳ ರವೀಂದ್ರ ನಾಯಕ್ ಎಂ. ಎಸ್. ಸಿ.

★

ಸಂಪಾದಕರು:
ಪಿ. ಎಲ್. ನಾರಾಯಣ ಭಟ್ಟ

ಸಂಪುಟ ೧೭ ಸಂಚಿಕೆ ೨೯ | ಉಡುಪಿ ಬುಧವಾರ, ೨೦--೯--೧೯೬೭ | ಬೆಲೆ ೧೨ ಪೈಸೆ.


# ಅರವತ್ತರ ಗಡಿಯಲ್ಲಿ ಕುಡ್ವಿ ವಾಸುದೇವ ಶೆಣೈಯವರು

ನಮ್ಮ ಜಿಲ್ಲೆಯ ಸುಪ್ರಸಿದ್ಧ ನಗೆ ಬರೆಹಗಾರರೂ ನಾಟಕಕಾರರೂ ಪತ್ರಿಕೋದ್ಯಮಿಗಳೂ ಮಂಗಳೂರಿನ ಪ್ರಭಾತವಾರ ಪತ್ರಿಕೆಯ ಸಂಪಾದಕರೂ ಆಗಿರುವ ಶ್ರೀ ಕುಡ್ವಿ ವಾಸುದೇವ ಶೆಣೈಯವರು ಅರುವತ್ತನೇ ವರ್ಷದ ಹುಟ್ಟು ಹಬ್ಬವನ್ನು ಆಚರಿಸುತ್ತಿರುವ ಈ ಸಂದರ್ಭದಲ್ಲಿ ಅವರಿಗೆ ಅಭಿನಂದನೆಯನ್ನು ಸಲ್ಲಿಸುವದು ನಮ್ಮ ಕರ್ತವ್ಯವಾಗಿದೆ.

ಶ್ರೀ ಕುಡ್ವಿ ವಾಸುದೇವ ಶೆಣೈಯವರ ಬಹು ಮುಖದ ಜೀವನವನ್ನು ಗುರುತಿಸಿ ಮಂಗಳೂರಿನ ಸಂಘ ಸಂಸ್ಥೆಗಳು ಅವರನ್ನು ಸನ್ಮಾನಿಸಿರುವದು ಯಥೋಚಿತವಾಗಿರುತ್ತದೆ.

ಶ್ರೀಶೆಣೈಯವರು ವಸ್ತುತಃ ವಿನೋದಪ್ರಿಯರು. ಅವರ ನಗೆ ಬರಹಗಳಂತೂ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯವಾಗಿದ್ದುದೆ. ಅವರು ಬರೆದಿರುವ ಅನೇಕ ನಾಟಕಗಳು ಕನ್ನಡ ರಂಗಭೂಮಿಯಲ್ಲಿ ಯಶಸ್ವಿಯಾಗಿ ಪ್ರದರ್ಶಿಸಲ್ಪಟ್ಟಿವೆ. ನಾಟಕ ರಚನೆಯಲ್ಲಿ ಎಷ್ಟು ಕೌಶಲ್ಯವಿದೆಯೋ ನಾಟಕವನ್ನ ಪರಿಣಾಮಕಾರಿಯಾಗಿ ರಂಗದ ಮೇಲೆ ಪ್ರಯೋಗಿಸುವದರಲ್ಲಿಯೂ ಅಷ್ಟೇ ಪ್ರಭಾವಿಗಳಾಗಿರುತ್ತಾರೆ.

ಅವರು ಸೃಷ್ಟಿಸಿರುವ ಸಾಹಿತ್ಯ ಹಾಗೂ ನಾಟಕಗಳಲ್ಲಿ ಮಾನವ ಸಹಜವಾದ ಸ್ವಭಾವ ಸನ್ನಿವೇಶಗಳು ತುಂಬಿರುತ್ತವೆ. ಪ್ರತಿಯೊಂದು ಪಾತ್ರ ಪೋಷಣೆಯಲ್ಲಿ ಸಾಮಾಜಿಕ ಪ್ರಜ್ಞೆ ಇದ್ದೆ, ಸಮಾಜದ ಪ್ರಶ್ನೆಯೇ ಆಗಲಿ ಯಾವ ಸಮಸ್ಯೆಯೇ ಆಗಲಿ ಯಾರ ಮನಸ್ಸನ್ನೂ ಕೆಣಕಿಸದೆ ಮಾನಸಿಕವಾಗಿ ಪರಿವರ್ತನ ಗೊಳಿಸುವ ಶಕ್ತಿ ಮತ್ತು ಸ್ಫೂರ್ತಿ ಅವರ ಸಾಹಿತ್ಯದಲ್ಲಿದೆ. ವಿನೋದಪ್ರಿಯರಿದ್ದ ಹಾಗೆಯೇ ವಿಚಾರ ಶೀಲರೂ ಹೌದು. ಸಮಾಜದವನ್ನು ತಿದ್ದುವ ಮಾರ್ಗದಲ್ಲಿ ಅವರು ಅನುಸರಿಸುತ್ತಿರುವ ವಿಧಾನವೇ ಬೇರೆ. ವಿನೋದದೊಂದಿಗೆ ವಿಚಾರದ ಗುಳಿಗೆಯನ್ನು ತುರುಕಿಸುವದು ಅವರ ಹಾಸ್ಯ ಪ್ರವೃತ್ತಿಯ ಒಂದು ವೈಶಿಷ್ಟ್ಯ.

ವಿಷಯದ ಆಳಕ್ಕೆ ಹೋಗುತ್ತಾರೆ. ಅದನ್ನು ಪರಿಪೂರ್ಣವಾಗಿ ಅರಿತುಕೊಳ್ಳುತ್ತಾರೆ. ತಾನು ಪಡೆದ ಅನುಭವವನ್ನು ಯಥಾವತ್ತಾಗಿ ಇನ್ನೊಬ್ಬರ ಮನಮುಟ್ಟುವ ರೀತಿಯಲ್ಲಿ ನೀಡುವಂಥ ಕಥನ ಕೌಶಲ್ಯ ಶ್ರೀ ಶೆಣೈಯವರಿಗೆ ಕರಗತವಾಗಿದೆ.

ಅವರು ಸನಿಹದಲ್ಲಿರುವಾಗ ಕಿಚಕುಳಿ ಹಾಕಿ ನಮ್ಮನ್ನು ಕೆಣಕಿಸುತ್ತಾರೆ ನಮಗಿಂತಲೂ ಚಿಕ್ಕವರ ಹಾಗೆ ತೋರಿಸಿಕೊಳ್ಳುತ್ತಾರೆ. ಅವರೊಡನೆ ಸಂಭಾಷಿಸಿದವರಿಗೆ ಅರವತ್ತು ವರ್ಷದ ತುಂಬು ಜೀವನದಲ್ಲಿ ಏನುಂಟು ಏನಿಲ್ಲವೆನ್ನುವದು ಖಚಿತವಾಗುತ್ತದೆ.

ನಗೆ ಸಾಹಿತ್ಯ ಅವರ ಜೀವನದ ಹಿರಿಮೆಯ ಗುಟ್ಟು. ಜೀವನದ ಅನೇಕ ಕಹಿ ಅನುಭವಗಳನ್ನು ನುಂಗಿಕೊಂಡು ಇತರರನ್ನೂ ನಗಿಸಿ ನಡುವೆ ತಾನು ಮೆತ್ತಗೆ ಮಂದಹಾಸ ಬೀರುವದು ಅವರ ವೈಶಿಷ್ಟ್ಯ. ತನ್ನ ಮನಸ್ಸಿನ ಕಹಿ ಅನುಭವವನ್ನು ಮರೆಯುವದಕ್ಕೆ ಇತರರನ್ನು ನಗಿಸುವದು ಅಪಥ್ಯವಲ್ಲವೆಂದು ಅವರು ಗ್ರಹಿಸಿರುವಂತಿದೆ.

ಪತ್ರಿಕೋದ್ಯಮ ಅವರ ಬೆನ್ನು ಹಿಡಿದು ಬಂದ ಉದ್ಯಮ ದಿವಂಗತ ವಿ. ಎಸ್. ಕುಡ್ವ ಮತ್ತು ದಿವಂಗತ ಎಂ. ಎನ್. ಕಾಮತರ ಸಹವಾಸ ಬಹಳಷ್ಟು ಉತ್ತೇಜನ ನೀಡಿರ ಬಹುದು. ಕನ್ನಡದ ಬಗ್ಗೆ ಹೆಚ್ಚಿನ ಆಸಕ್ತಿ ಇಲ್ಲದೆ ಇರುವ ಕಾಲಕ್ಕೆ ಕನ್ನಡದಲ್ಲಿ ಒಳಿತನ್ನು ನೀಡಿ ಜನರಲ್ಲಿ ಅಭಿರುಚಿ ಬೆಳೆಸಿದವರಲ್ಲಿ ಶ್ರೀ ಶೆಣೈಯವರೂ ಒಬ್ಬರು.

ಇಂಥ ಬಹು ಮುಖ ಪ್ರತಿಭಾವಂತರಾದ ಶ್ರೀ ಶೆಣೈಯವರು ತನ್ನ ಅರುವತ್ತನೇ ವರ್ಷಕ್ಕೆ ಪದಾರ್ಪಣ ಮಾಡುತ್ತಿರುವ ವೇಳೆ ಅವರಿಗೆ ಶುಭವನ್ನು ಹಾರೈಸುವದು ಮಾತ್ರವಲ್ಲದೆ ದೀರ್ಘಕಾಲ ನಮ್ಮ ಮಧ್ಯೆ ಇದೇ ಪರಿಯಲ್ಲಿ ನಮಗೆ ಉತ್ತೇಜನವನ್ನೀಯುವಂತಾಗಲೆಂದು ಹಾರೈಸುತ್ತೇವೆ—

## ಮಂಗಳೂರು ಪ್ರೆಸ್‌ಕ್ಲಬ್ಬಿನವರಿಂದ ಕುಡ್ವಿ ವಾಸುದೇವ ಶೆಣೈಯವರಿಗೆ ಸನ್ಮಾನ

ಜಿಲ್ಲೆಯ ಸುಪ್ರಸಿದ್ಧ ನಗೆ ಬರೆಹಗಾರರೂ ಖ್ಯಾತ ಪತ್ರಿಕೋದ್ಯಮಿಗಳೂ ಮತ್ತು ಪ್ರಭಾತವಾದ ಪತ್ರಿಕೆಯ ಸಂಪಾದಕರೂ ಆಗಿರುವ ಶ್ರೀ ಕುಡ್ವಿ ವಾಸುದೇವ ಶೆಣೈಯವರ ಷಷ್ಠ್ಯಬ್ದಿ ಸಮಾರಂಭದ ನಿಮಿತ್ತ ಮಂಗಳೂರು ಮೋತಿ ಮಹಲಿನಲ್ಲಿ ಏರ್ಪಡಿಸಿದ್ದರು.

ನವಭಾರತ ದೈನಿಕ ಪತ್ರಿಕೆಯ ಸಂಪಾದಕರಾದ ಶ್ರೀ ಸಂಜೀವ ಕುಡ್ವರವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

ಪ್ರೆಸ್‌ಕ್ಲಬ್ಬಿನ ಅಧ್ಯಕ್ಷ ಶ್ರೀ ನರಸಿಂಹರಾಯರು ಸ್ವಾಗತ ಭಾಷಣ ಮಾಡಿದರು.

ಶ್ರೀ ವಾಸುದೇವ ಶೆಣೈಯವರ ಬಹುಮುಖ ಪ್ರತಿಭೆಯ ಕುರಿತು ಶ್ರೀಗಳಾದ ಬಿ. ವಿ. ಬಾಳಿಗಾ. ಪಿ. ಕೆ. ನಾರಾಯಣ, ಮತ್ತು ಮನೋಹರ ಕಾಮತರು ಮಾತನಾಡಿದರು.

ಶ್ರೀ ಕುಡ್ವಿ ವಾಸುದೇವ ಶೆಣೈಯವರು ತನ್ನ ಉತ್ತರದಲ್ಲಿ ತನ್ನ ಮೂವತ್ತು ವರ್ಷಗಳ ಸಾಹಿತ್ಯ ಹಾಗೂ ಪತ್ರಿಕೋದ್ಯಮ ಕ್ಷೇತ್ರದ ಅನುಭವವನ್ನು ವಿವರಿಸುತ್ತಾ ಉತ್ತಮ ಪತ್ರಿಕೋದ್ಯಮ ಸಾಹಿತ್ಯದ ಅಭಿರುಚಿಯು ಮೂಲಕ ಬೆಳೆಯಬೇಕಾಗಿದೆ. ಪತ್ರಿಕಾ ಸಂಪಾದಕ ಸರಕಾರ ಹಾಗೂ ಪ್ರಜಾಜನರ ಮಧ್ಯವರ್ತಿಯಾಗಿ ಸೇವೆ ಸಲ್ಲಿಸಬೇಕಾಗಿದೆ. ಪತ್ರಿಕೋದ್ಯಮವನ್ನು ದುರುಪಯೋಗಗೊಳಿಸದೆ ಅದರ ಘನತೆಗೆ ಕುಂದುಬರದಂತೆ ಕಾಪಾಡಿಕೊಳ್ಳುವದು ಪತ್ರಿಕಾ ಸಂಪಾದಕನ ಕರ್ತವ್ಯವಾಗಿದೆಂದರು. ಆರಂಭದೆಸೆಯಲ್ಲಿ ದಿ॥ ವಿ. ಎಸ್. ಕುಡ್ವ ಎಂ. ಎನ್. ಕಾಮತ್ ಮೊದಲಾದವರ ನೆರವು ಹಾಗೂ ಮಾರ್ಗದರ್ಶನ ತಮಗೆ ದೊರಕಿತೆಂದು ಹೇಳಿದರು.

ಅಧ್ಯಕ್ಷಸ್ಥಾನದಿಂದ ಶ್ರೀ ಸಂಜೀವ ವಿ. ಕುಡ್ವರವರು ತಮ್ಮ ಭಾಷಣದಲ್ಲಿ ಕನ್ನಡನಾಡಿನಲ್ಲಿ ಪತ್ರಿಕೋದ್ಯಮ ಬೆಳೆಯಬೇಕಾದಷ್ಟು ಬೆಳೆಯಲಿಲ್ಲ ಪತ್ರಿಕೆಯ ಬೆಳವಣಿಗೆಗೆ ಸಾಹಿತ್ಯ ಜ್ಞಾನ ಮಾತ್ರವಲ್ಲದೆ ತಾಂತ್ರಿಕ ಜ್ಞಾನವೂ ಅಷ್ಟೇ ಪ್ರಧಾನವಾಗಿದೆ. ಶ್ರೀ ಕುಡ್ವಿ ವಾಸುದೇವ ಶೆಣೈಯವರು ಕನ್ನಡ ಭಾಷೆ ಸಾಹಿತ್ಯ ಹಾಗೂ ಪತ್ರಿಕೆಗಳಿಗೆ ಹೆಚ್ಚಿನ ಪ್ರೋತ್ಸಾಹವಿಲ್ಲದ ಕಾಲದಿಂದಲೂ ಅದರ ಉನ್ನತಿಗಾಗಿ ದುಡಿದಂಥವರು. ಅವರ ಆಳವಾದ ಅನುಭವ ಅನುಭವ ಅನುಕರಣೀಯ ಹಾಗೂ ಆದರ್ಶಪ್ರಾಯವಾಗಿದೆಂದು ಹೇಳಿದರು.

ಕಾರ್ಯದರ್ಶಿ ಶ್ರೀ ಪಿ ಗೋಪಾಲಕೃಷ್ಣ ಅವರು ಧನ್ಯವಾದ ಸಮರ್ಪಿಸಿದರು.




# ಪಾಳಯದಲ್ಲಿ

ಮೂಲ: ಶ್ರೀ ಮಾಮಾ ವರೇರಕರ ಅನುವಾದ: ಶ್ರೀ ರಾ. ನಾ. ರತನ್

ವೈದ್ಯ ವೃತ್ತಿಯನ್ನವಲಂಬಿಸಿದ್ದರಿಂದ ಅವನು ಯುದ್ಧಭೂಮಿಗೆ ತೆರಳಿದ್ದ. ಮನೆ ಮಂದಿಗೆ ಅವನ ಈ ಸಾಹಸ ಸುತರಾಂ ಇಷ್ಟವಿರಲಿಲ್ಲ. ಮನೆಯ ಕಡೆಯಿಂದ ನೋಡಿದರೆ ಅವನು ಒಬ್ಬ ಒಳ್ಳೆಯ ಶ್ರೀಮಂತನೇ ಹೌದ. ಕೆಲವು ದಿನಗಳಿಗೆ ಒಂದೆ ತಾನೆ ಅವನು ತನ್ನ ಸ್ವಂತ ಔಷಧಾಲಯವನ್ನು ತೆರೆದಿದ್ದ. ಪ್ರಾಕ್ಟೀಸ್ ಕೂಡ ಚೆನ್ನಾಗಿ ನಡೆಯಲಾರಂಭಿಸಿತು. ಆದರೆ ಇತ್ತ ಯುದ್ಧ ಆರಂಭವಾಯಿತು. ಅತ್ತ ಇವನ ತಲೆಯಲ್ಲಿ ಇದ್ದಕ್ಕಿದ್ದಂತೆಯೇ ಒಂದು ತರಹದ ಗಾಳಿ ತುಂಬಿ ಹೋಯಿತು. ಸರಿ, ತನ್ನ ಹೆಸರನ್ನು ದಾಖಲ್ಮಾಡಿಸಿದ. ಒಮ್ಮೆಲೇ ರಣರಂಗಕ್ಕೆ ಹೊರಟು ಬಿಟ್ಟ.

ಬೆಲ್ಜಿಯಮ್ಮಿನ ರಣರಂಗದ ರಕ್ಷಿತ ಪ್ರದೇಶಕ್ಕೆ ಪ್ರಥಮ ಗುರ್ಖಾ ಸೈನ್ಯದಳವೊಂದು ತೆರಳಿತ್ತು. ಅದರೊಡನೆ ಇವನೂ ಡಾಕ್ಟರ್ ಆದ ಕಾರಣ ಆಸ್ಪತ್ರೆಯ ದ್ವಿತೀಯ ದರ್ಜೆಯ ಅಧಿಕಾರಿಯಾಗಿ ಹೋಗಿದ್ದ. ಅವನ ಜೀವನವಿಡೀ ಸುಖಸಂತೋಷದಲ್ಲಿ ಕಳೆದಿತ್ತು. ಯಾವ ಮಾತಿನ ಕೊರತೆಯೂ ಅವನಿಗಿರಲಿಲ್ಲ. ಹಣ ಕೊಡಬೇಕಾದ ಹಾಗೆ ಇತ್ತು. ಈ ರೀತಿಯ ಸುಖ-ಸಮೃದ್ಧಿಯ ಜೀವಮಾನವನ ಮಾಡಿದ್ದ ಕಾರಣದಿಂದಾಗಿ ಮೊತ್ತ ಮೊದಲು ರಣಕ್ಷೇತ್ರದ ಜೀವನವು ಅವನಿಗೆ ಬಹಳ ಅಸಹ್ಯವಾಗಿ ಕಂಡುಬಂತು.

ಹಿಂದೂಸ್ಥಾನದಲ್ಲಿದ್ದಾಗಲೇ ಅವನು ಔಷಧಾಲಯದ ಕೆಲಸವನ್ನು ಬಹಳ ಮಾಡಿ ಅನುಭವ ಪಡೆದಿದ್ದ. ಮುಂದುವರಿದು ಒಬ್ಬ ವಿಖ್ಯಾತ ಸರ್ಜನ್ ಆಗುತ್ತಾನೆಂದು ಎಲ್ಲರೂ ಆಶಾಭಾವನೆಯಿಂದ ಕಾದಿದ್ದರು. ಹೊಸ ತರುಣ ವೈದ್ಯರ ಪೈಕಿ ಸರ್ಜರಿಯಲ್ಲಿ ಅವನಿಗೆ ಸರಿ ತೂಗುವವರು ಪ್ರಾಯಶಃ ಯಾರೂ ಇರಲಿಲ್ಲ. ಇಂಥವನಿಗೆ ಇದೆಲ್ಲಿಯ ಬುದ್ಧಿ ಹೊಳೆಯಿತು? ಇದೇ ಎಲ್ಲರಿಗೂ ಆಶ್ಚರ್ಯ!

ಅವನಿಗೂ ಕೂಡ ಹಾಗೆ ಅನ್ನಿಸುತ್ತಿತ್ತು! ಸುಖಾಸೀನ ಜೀವಕ್ಕೆ ಯುದ್ಧರಂಗದಲ್ಲುಂಟಾಗುವ ಕಷ್ಟವನ್ನು ಸಹಿಸಿಕೊಳ್ಳುವುದು ಮೊದ—ಮೊದಲು ಬಹಳ ಕಠಿಣವಾಗಿ ಕಂಡು ಬಂತು. ಮೊದಲ ಹೊಡೆತದಲ್ಲಿಯೇ ಗಾಯಗೊಂಡ ಸೈನಿಕರ ಗಾಡಿ—ಗಾಡಿಗಳು ಬರಲಾರಂಭಿಸಿದವು. ಆ ಸಮಯದಲ್ಲಿ ಅವರ ಗಾಯಗಳಿಗೆ ಪಟ್ಟಿ ಕಟ್ಟುವ ಕೆಲಸವಿದ್ದ ಕಾರಣದಿಂದಾಗಿ ಅವನಿಗೆ ಊಟ ಮಾಡುವುದಕ್ಕೂ ಸಹ ಅವಕಾಶ ಒದಗಿ ಬರುತ್ತಿರಲಿಲ್ಲ.

ಬರು ಬರುತ್ತಾ ಹೇಗಾಯಿತೆಂದರೆ ಊಟ ಮಾಡುವುದರತ್ತ ಅವನಿಗೆ ಪರಿಜ್ಞಾನವೇ ಇರುತ್ತಿರಲಿಲ್ಲ. ಏನು ಸಿಕ್ಕಿದರೂ ಸರಿ, ನಿಂತು—ನಿಂತಂತೆ ತಿಂದುಕೊಳ್ಳುತ್ತಿದ್ದ—ಸರಿ, ಕೆಲಸದಲ್ಲಿ ತಲ್ಲೀನನಾಗಿ ಬಿಡುತ್ತಿದ್ದ. ರೋಗಿಗಳ ಶುಶ್ರೂಷೆಯಲ್ಲಿ ಅವನು ಎಷ್ಟರಮಟ್ಟಿಗೆ ತನ್ಮಯನಾಗಿ ಬಿಡುತ್ತಿದ್ದನೆಂದರೆ, ಸ್ವಲ್ಪ ಕಾಲದ ನಂತರ ಅವನಿಗೆ ತನ್ನ ಮಾತೃಭೂಮಿಯದೂ ಸಹ ನೆನಪು ಬರುತ್ತಿರಲಿಲ್ಲ. ತಾನು ಹಿಂದೂಸ್ಥಾನದ ಒಬ್ಬ ವೈದ್ಯ ಹಾಗೂ ಸಾವಿರಾರು ಮೈಲಿ ದೂರ ಬಂದು ಗಾಯಕ್ಕೆ ಪಟ್ಟಿ ಕಟ್ಟುವ ಕೆಲಸ ಮಾಡುತ್ತಿದ್ದೇನೆ—ಈ ಜ್ಞಾನ ಕೂಡ ಅವನಿಗಿರಲಿಲ್ಲ.

ಹಗಲು—ರಾತ್ರಿ ಅವನು ಕೆಲಸದಲ್ಲಿ ಲೀನವಾಗಿರುತ್ತಿದ್ದ. ವಿಶ್ರಾಂತಿ ಅನ್ನುವುದು ಅವನಿಗೆ ಸಿಕ್ಕುತ್ತಲೇ ಇರಲಿಲ್ಲ. ಅವನೊಡನೆ ಬೇರೆ ವೈದ್ಯರೂ ಇದ್ದರು. ಇವರು ಕೆಲಸ ತಪ್ಪಿಸಿಕೊಳ್ಳುವುದರಲ್ಲಿ ಬಹಳ ನಿಷ್ಣಾತರು. ಆದರೆ ಅವರ ಸಂಗಡಿಗನಾದ ಈ ಒಬ್ಬ ವೈದ್ಯ ಮಾತ್ರ ರಾತ್ರಿ—ಹಗಲು ಕೆಲಸ ಮಾಡುವಂತಹವನು ಸಿಕ್ಕಿಬಿಟ್ಟಿದ್ದ ಹಾಗೂ ಬೇರೆಯವರ ಕೆಲಸವು ಸಹ ಇವನ ತಲೆಗೇ ಬಂದು ಬಿದ್ದ ಪಕ್ಷದಲ್ಲಿ ಅದರ ಬಗ್ಗೆ ಒಂದು ಚಕಾರವನ್ನೂ ಎತ್ತುತ್ತಿರಲಿಲ್ಲ. ಅಂಥ ಸ್ವಭಾವ ಇವನದು. ಈ ಕಾರಣಗಳಿಂದಾಗಿ ಅವರು ತಮ್ಮ ಭಾಗದ ಕೆಲಸಗಳನ್ನೂ ಕೂಡ ಇವನ ತಲೆಗೆ ಹೊರಿಸಿ ಇತರ ಕಾರ್ಯಕಲಾಪಗಳಲ್ಲಿ ಹೋಗಿ ಭಾಗವಹಿಸುತ್ತಿದ್ದರು. ಯುದ್ಧವೇನೋ ಭಯಂಕರವಾಗಿ ನಡೆಯುತ್ತಿತ್ತು. ಆದರೂ ಪ್ರತ್ಯಕ್ಷ ಸಮರ ಭೂಮಿಗೆ ತುಸು ದೂರದಲ್ಲಿ ನೆಲೆಸಿದ್ದ ಮಿಲಿಟರಿ ಆಸ್ಪತ್ರೆಯ ಪ್ರೇಮ ಸಮಾಜಕ್ಕೆ ಸ್ವಲ್ಪವಾದರೂ ಅಡೆ-ತಡೆ ಒದಗಿ ಬರುತ್ತಿತ್ತು ಎಂದು ಹೇಳಲು ಬರುತ್ತಿರಲಿಲ್ಲ. ದೊಡ್ಡ—ದೊಡ್ಡ ಪ್ರತಿಷ್ಠಿತ ಮನೆತನಸ್ಥರ ಹುಡುಗಿಯರು ನರ್ಸ್‌ಗಳಾಗಿ ಕೆಲಸಮಾಡಲು ಆ ವೇಳೆಯಲ್ಲಿ ಯುದ್ಧಭೂಮಿಗೆ ಬಂದಿದ್ದರು. ಅವರ ಸುತ್ತ ಮುತ್ತ ಓಡಾಡುವ ಡಾಕ್ಟರುಗಳು ಹಲವು ಕೆಲಸ ತಪ್ಪಿಸಿಕೊಳ್ಳಲು ಯಾವ ಉಪಾಯಗಳನ್ನು ಕಂಡು ಹಿಡಿಯಬೇಕು ಎಂದು ಯೋಚಿಸುವುದರಲ್ಲಿಯೇ ತನ್ನ ಮಿದುಳನ್ನು ಓಡಿಸುತ್ತಿತ್ತು.

ಆ 'ಬ್ಯಾಚಿ'ನಲ್ಲಿ ಡಾಕ್ಟರ್ ಶರಚ್ಚಂದ್ರನೊಬ್ಬನೇ ಹಿಂದೂಸ್ಥಾನಿ ಡಾಕ್ಟರ್ ಆಗಿದ್ದ. ಮಿಕ್ಕವರು ಯುರೋಪಿಯನ್ನರು ಹಿರಿಯ ಸರ್ಜನ್ ಇಂಗ್ಲೀಷಿನವನು, ಕೆಲವು ಫ್ರೆಂಚ್ ವೈದ್ಯರಿದ್ದರು. ರೋಗಿಗಳ ಶುಶ್ರೂಷೆ ಮಾಡುವ ಆಂಗ್ಲ ನರ್ಸ್‌ಗಳಿಗೆ ಸರಬರಾಜು ಮಾಡುವಲ್ಲಿ ಫ್ರೆಂಚ್ ಡಾಕ್ಟರ್‌ಗಳು ಎಷ್ಟು ತತ್ಪರರಾಗಿದ್ದರೋ ಅಷ್ಟರ ಮಟ್ಟಿಗೆ ಆಂಗ್ಲೇಯರಿರಲಿಲ್ಲ.

ಎಲ್ಲರೂ ಮೃತ್ಯುವನ್ನು ಎದುರು ನೋಡಿಕೊಂಡೇ ಬಂದಿದ್ದರು. ರಕ್ಷಿತ ಸ್ಥಳದಲ್ಲಿದ್ದ ಸಿಪಾಯಿಗಳಿಗೆ ತಮ್ಮ ಜೀವದ ಬಗ್ಗೆ ಲಕ್ಷ್ಯವೇ ಇರಲಿಲ್ಲ. ಇವರಿಗೆ ಹಿಂದೆ ಇದ್ದ ವೈದ್ಯರ ಮೇಲೂ ಸಹ ಎಲ್ಲಿಂದ ಹಾಗೂ ಯಾವಾಗ ಆಕಾಶ ಕಳಚಿ ಬೀಳುವುದೋ ಎಂಬುದರ ಬಗ್ಗೆ ನಿಯಮವೇನೂ ಇಲ್ಲದ್ದರಿಂದ, ಕೈಗೆ ಸಿಕ್ಕಿದ ಈ ಕ್ಷಣವನ್ನು ಸುಖಪೂರ್ವಕ ಯಾವ ರೀತಿ ಕಳೆಯಬಹುದೆಂಬುದನ್ನೇ ಇವರು ಯೋಚಿಸುತ್ತಿದ್ದರು. ಅಲ್ಲಿ ಪಾಪ ಪುಣ್ಯಗಳನ್ನು ಕುರಿತ ಕಲ್ಪನೆಯೇ ಯಾವುದೂ ಇರಲಿಲ್ಲ. ನೀತಿ—ಅನೀತಿಯದೂ ಕೂಡ ಯಾವ ಕಲ್ಪನೆಯಿರಲಿಲ್ಲ. ಕಲ್ಪನೆಯಿದ್ದದ್ದು ಕೇವಲ ಒಂದರದೇ, ಮೃತ್ಯು ಸನ್ನಿಹಿತವಾಗಿ ಬಿಟ್ಟಿದೆ. ಜೀವನ ಇನ್ನೇನು ಮುಗಿದು ಹೋಗುತ್ತದೆ. ಈ ಪ್ರಪಂಚವನ್ನು ತೊರೆದು ಯಾವಾಗ ಹೊರಟು ಬಿಡಬೇಕಾಗುವುದು ಎಂಬುದರ ಭರವಸೆಯೇ ಇಲ್ಲ. ಈ ಕಾರಣ, ಎದುರಿಗೆ ದೊರೆತ ಕ್ಷಣಗಳಿಂದ ಎಷ್ಟು ಸುಖ ಪಡೆದು ಕೊಳ್ಳಬಹುದೋ ಅಷ್ಟನ್ನು ಪಡೆದುಕೊಳ್ಳಬೇಕು. ಇದೊಂದೇ ವೃತ್ತಿಯನ್ನಾಧರಿಸಿ ಡಾಕ್ಟರುಗಳು ಮತ್ತು ನರ್ಸ್‌ಗಳ ದಳವು ಒಂದು ಕಡೆ ಒಟ್ಟಾಗುತ್ತಿತ್ತು.

ಯಾರೂ ಕೂಡ, ಯಾರದೇ ಆಗಲಿ, ವಿನಯವನ್ನು ಭಂಗಗೊಳಿಸಬೇಕೆಂಬ ಮಾತನ್ನು ಮನಸ್ಸಿನಲ್ಲಿ ಎಣಿಸಿರಲಿಲ್ಲ. ಅಥವಾ ವಿವಾಹದ ವಿಚಾರ ಕೂಡ ಯಾರ ಮನಸ್ಸಿಗೂ ಬಂದಿರಲಿಲ್ಲ. ಎರಡೂ ದಳಗಳನ್ನು ಒಟ್ಟಿಗೆ ಒಂದೆಡೆ ಕುಳಿತಿರುವುದನ್ನು ಕಂಡ ಶರಚ್ಚಂದ್ರನ ಭಾರತೀಯ ಮನಸ್ಸು ಬೆಚ್ಚಿ ಬೀಳುತ್ತಿತ್ತು. ಅನುವಂಶಿಕ ಸಂಸ್ಕಾರಗಳ ಕಾರಣದಿಂದ ಇಲ್ಲಿ ಏನೋ ಪಾಪವಿದೆಯೆಂದು ಅವನಿಗನ್ನಿಸುತ್ತಿತ್ತು. ಈ ಗುಂಪುಗಳಿಂದ ಸಾಧ್ಯವಾದ ಮಟ್ಟಿಗೂ ಯಾವ ರೀತಿ ತಾನು ದೂರವಿರಬಹುದೆಂಬುದನ್ನು ಕುರಿತು ಅವನು ವಿಚಾರ ಮಾಡುತ್ತಿದ್ದ. ಇದರಿಂದಾಗಿಯೇ ಅನ್ಯ ಡಾಕ್ಟರುಗಳಿಗೆ ಅವನು ಒಂದು ತಮಾಷೆಯ ವಸ್ತುವಾಗಿ ಬಿಟ್ಟಿದ್ದ.

ಆದರೆ ಅವನ ಈ ವೃತ್ತಿ ಹೆಚ್ಚು ಕಾಲದ ವರೆಗೆ ಸ್ಥಿರವಾಗುಳಿಯಲಿಲ್ಲ. ಕಂದಕಗಳಿಗೆ ರೆಡ್‌ಕ್ರಾಸಿನ ಸೇವಾ ಕಾರ್ಯಗಳಿಗೆಂದು ಹೋದ ಡಾಕ್ಟರುಗಳು ಕೊಲ್ಲಲ್ಪಟ್ಟರು ಎಂಬೀ ವಿಷಯವನ್ನು ಯಾವಾಗ ಅವನು ಕಂಡುಕೊಂಡನೋ ಆಗ ಅವನಿಗೂ ಕೂಡ ಜೀವನದ ಕ್ಷಣಭಂಗುರತೆಯು ಅನುಭವಕ್ಕೆ ಬರಲಾರಂಭಿಸಿತು. ಈ ಕ್ಷಣಿಕತೆಗೆ ಇತಿ-ಮಿತಿಯಿರಲಿಲ್ಲ. ಸಂಸಾರಸ್ಥರು ಅದರ ಬಗ್ಗೆ ಕಲ್ಪನೆಯೇನೂ ಮಾಡಲಾಗುತ್ತಿರಲಿಲ್ಲ. ಪ್ಲೇಗಿನಂತಹ ಸಾಂಕ್ರಾಮಿಕ ರೋಗದ ಕಾಲದಲ್ಲಿ ಕ್ಷಣ ಭಂಗುರತೆಯ ಬಗ್ಗೆ ಒಂದು ಅಸ್ಪಷ್ಟದಂತಿರುವ ಕಲ್ಪನೆ ಮನುಷ್ಯರಿಗೆ ಬಂದು ಬಿಡುತ್ತದೆ. ಆದರೆ ಯುದ್ಧ ಕ್ಷೇತ್ರದ ಕ್ಷಣ ಭಂಗುರತೆಯು ಇದಕ್ಕಿಂತಲೂ ಹೆಚ್ಚು ಜಾಜ್ವಲ್ಯವಾಗಿರುತ್ತದೆ.

ಇವನು ಬೇರೆಯವರಿಗೆ ಹೆಸರುಗಳನ್ನಿಡುತ್ತಿದ್ದ. ಆದರೆ ಕಾಲ-ಕ್ರಮೇಣ ಅದು ತನ್ನ ತಪ್ಪೆಂದು ಅವನಿಗೆ ಭಾಸವಾಗಲಾರಂಭಿಸಿತು. ಜೀವನದಲ್ಲಿ ಲಭಿಸಿದ ಇಷ್ಟೊಂದು ಸಮಯವನ್ನೂ ಕೂಡ ವ್ಯರ್ಥ ಮಾಡಿಕೊಂಡು ಬಿಟ್ಟೆ. ಎನ್ನುವ ಮಾತೂ ಸಹ ಅವನ ಮನಸ್ಸಿಗೆ ತಾಕಲಾರಂಭಿಸಿತು.

ಕ್ರಮ-ಕ್ರಮವಾಗಿ ಅವನು ಕೂಡ ಆ ಗುಂಪಿನೊಡನೆ ಸೇರಲಾರಂಭಿಸಿದ. ಭಗವಂತನಿಂದ ಅವನಿಗೆ ಎಂತಹ ಶರೀರ-ಸೌಷ್ಠವ ಲಭಿಸಿತ್ತೆಂದರೆ ಸ್ತ್ರೀಯರು ಸಹಜವಾಗಿಯೇ ಅವನತ್ತ ಆಕರ್ಷಿತರಾಗಿ ಬಿಡುತ್ತಿದ್ದರು. ಅವನಾದರೂ ಹಿಂದೂಸ್ಥಾನಿಯಾಗಿದ್ದ. ಆದರೆ ಯುರೋಪಿಯನ್ ಸಮುದಾಯದಲ್ಲಿ ಕಪ್ಪಾಗಿ ಕಂಡುಬರುವಷ್ಟು ಕಪ್ಪಾಗಿ ಅವನಿರಲಿಲ್ಲ. ಮೂಗುಮುಖದ ರಚನೆಯಿಂದಲಂತೂ ಅವನು ಬಹಳ ಸುಂದರನಾಗಿದ್ದ.

ಸಂಗ್ರಾಮಭೂಮಿಯಲ್ಲಿದ್ದ ಸೋತ-ಗೆದ್ದವರ ಭೇದವನ್ನು ಯಾರೂ ವಿಶೇಷ ಮನಕ್ಕೆ ತಂದುಕೊಳ್ಳುತ್ತಿರಲಿಲ್ಲ. ಸಮಿತಿಯನ್ನು ಕುರಿತು ಬಡ-ಬಡನೆ ಬಡಿದುಕೊಳ್ಳುವ ಜನರು ರಣಭೂಮಿಗೆ ಹೋಗಿದ್ದ ಪಕ್ಷಕ್ಕೆ, ಅವರು, ದೇಶದ—ಭಿನ್ನತೆ ಮತ್ತು ದೇಹ—ಭಿನ್ನತೆಯ ಕಠಿಣತೆಗಳು ಸಮತೆಗೆ ಅಡ್ಡ ಬರುತ್ತವೆಯೆಂಬುದಾಗಿ ಎಂದೂ ಪ್ರತಿವಾದಿಸುತ್ತಿರಲಿಲ್ಲ

ಆ ದಳದಲ್ಲಿ ಇವನಂತೆಯೇ ಒಬ್ಬ ನರ್ಸ್ ಕೂಡ ಇದ್ದಳು. ಅವಳೂ ಕೂಡ ಇವನ ತರಹವೇ ಇತರ ಜನರೊಡನೆ ಸೇರದೆ ದೂರ-ದೂರ ಇರುತ್ತಿದ್ದಳು. ಬೇರೆ ಹುಡುಗಿಯರೂ ಸಹ ಧನಿಕ ಮನೆತನದಿಂದಲೇ ಬಂದಿದ್ದರೆಂಬುದೇನೋ ನಿಜ. ಆದರೂ ಅವರ ರಕ್ತ ಈ ಹುಡುಗಿಯಂತೆ "ನೀಲಿ" ಯಾಗಿರಲಿಲ್ಲ. ತನ್ನ "ನೀಲಿ" ರಕ್ತದ ಬಗ್ಗೆ ಅವಳಿಗೆ ಬಹಳ ಅಭಿಮಾನವಿತ್ತು. ಇದರಿಂದಾಗಿಯೇ ಅವಳು ಅನ್ಯ ಜನರೊಂದಿಗೆ ಸೇರದೆ ಯಥಾಸಂಭವ ದೂರವೇ ಇರುತ್ತಿದ್ದಳು. ಅವಳೂ ಕೂಡ ಈ ಒಂಟಿತನದಿಂದ ಬೇಸತ್ತು ಹೋಗಿದ್ದಳು. ಹೀಗೆ ಒಬ್ಬೊಂಟಿಗತನದಿಂದ ಬೇಸತ್ತ ಈ ಇಬ್ಬರು ವ್ಯಕ್ತಿಗಳು ಸಹಜವಾಗಿಯೇ ಒಂದು ಕಡೆ ಬಂದರು. ಗುಂಪಿನವರು ಅವರನ್ನು ತಮ್ಮಲ್ಲಿ ಸೇರಿಸಿಕೊಳ್ಳುವ ಪ್ರಯತ್ನ ಪಡುತ್ತಿದ್ದರು. ಅವರಿಗೂ ಕೂಡ ಬಾರಿ-ಬಾರಿಗೂ ಅನ್ನಿಸುತಿತ್ತು -ನಾವೂ ಹೋಗಿ ಆ ಗುಂಪಿನಲ್ಲಿ ಸೇರಿ ಬಿಟ್ಟೆವೆಂದರೆ, ಇದರರ್ಥ, ನಾವು ನಮ್ಮ ಸ್ವಭಾವವನ್ನು ಬಿಟ್ಟುಬಿಟ್ಟೆವು ಎಂದೇ ಆಗುತ್ತದೆ. ಹೀಗೆಂದು ಅವರು ವಿಚಾರಮಾಡಿ ನೋಡಿದರು. ಈ ವಿಚಾರದಿಂದಾಗಿ ಇಬ್ಬರೂ ಕಾಡ ಏಕಾಂತತೆಯ ತಮ್ಮ ಸ್ವಭಾವವನ್ನು ಜಾರಿಯಲ್ಲಿಟ್ಟರು. ಈ ದೃಷ್ಟಿಯಿಂದಲೂ ಸಹ ಬೇರೆಯವರಿಗೆ ಒಂದು ಹಾಸ್ಯಾಸ್ಪದ ವಿಷಯವಾಗಲಾರಂಭಿಸಿದರು.

ಈ ಮಾತುಗಳನ್ನೆಲ್ಲಾ ಹಿರಿಯ ಸರ್ಜನ್‌ನ ಗಮನಕ್ಕೆ ಬಾರದಿರಲಿಲ್ಲ. ಉಚ್ಚ

[ಒಂಭತ್ತನೇ ಪುಟ ನೋಡಿ]

# ಕೊರವಂಜಿ ಕಾಡಿಗೆ ಹೊರಟು ಹೋದಳು

ನಾ. ಕಸ್ತೂರಿ

ತಿಂಗಳ ಮೊದಲನೆ ತಾರೀಕು ಅಂದರೆ ಯಾರಿಗೆ ಖುಷಿ ಇಲ್ಲ! ಅದರಲ್ಲೂ ತಿಂಗಳ ಸಂಬಳವನ್ನೇ ನೆಚ್ಚಿ ಬದುಕುವ ಜನಕ್ಕೆ ಮೊದಲತೇದಿ ಮಹಾದಿನ! ಆ ಹೊತ್ತು ಒಂದು ದಿನವಾದರೂ ನಾವು ಸಾವಿರ ರೂಪಾಯಿ ಇಲ್ಲದೆ ಹೋದರೂ ನೂರು ರೂಪಾಯಿನ ಸರದಾರರ! ಜೇಬಿನಲ್ಲಿ ಚಿಣಿಮಿಣಿ ಅನ್ನುತ್ತೆ ಹಣ! ಒಂದು ದಿನ ಒಂದೇ ಅಷ್ಟೆ- ಅದೂ ಸಂಜೆ ತನಕ. ಮನೆ ಸೇರಿದ ವೇಳೆ ಆ ಭಾರಿ ಸಂಪಾದನೆ ನೂರು ತೆರನಾಗಿ ಬಟವಾಡಿ ಆಗಿ ಹೋಗುತ್ತದೆ. ಮರುದಿನ ಮತ್ತೆ ಬರಿಗೈಯೆ. ಬರಿಗೈಯೆ ಸ್ಥಾಯಿ ಭರ್ತಿ ಸಂಚಾರಿ, ಅಲ್ಲವೇ!

ಇಲ್ಲಿಯ ವರೆಗೂ ಮೊದಲನೆ ತಾರೀಕು ಅಂದರೆ ಇನ್ನೊಂದು ಆಕರ್ಷಣೆ ಇತ್ತು. ಸಂಬಳದ ಹಾಗೇ ಅದೂ ಸರಿಯಾಗಿ ಬಂದದೇ ತಾರೀಖು ಒದಗುತ್ತಿತ್ತು. ಆದರೆ ಅದು ಹಣದ ಹಾಗೇ ಹರಿದುಹೋಗದೆ, ನಮ್ಮಲ್ಲೇ ಉಳಕೊಳ್ಳುತ್ತಿತ್ತು. ಅದರ ಚಮಕು, ಅದರ ನೆನಪು, ರುಚಿ, ಸಿಹಿ ಖಾರ ಒಗರು ತಿಂಗಳುದ್ದಕ್ಕೂ ಉಳಿಕೊಳ್ಳುತ್ತಿದ್ದವು, ಅದೇ ನಮ್ಮ 'ಕೊರವಂಜಿ'ಯ ನೆನಪು! ತಿಂಗಳ ಮೊದಲಿಗೆ ಸರಿಯಾಗಿ ಕೊರವಂಜಿ ಬರುತ್ತಿದ್ದಳು. ಕಣಿ ಹೇಳಿ ನಕ್ಕು ನಗಿಸುತ್ತಿದ್ದಳು, ನಲಿಸುತ್ತಿದ್ದಳು. ಲಕಲಕಾಂತ ಬಂದು ನಗಿಸಿ ಉತ್ಸಾಹ ಕೆರಳಿಸಿ ಹೋಗುತ್ತಿದ್ದಳು. ಎಷ್ಟೋ ಸಲ ಚುರುಕು ಮುಟ್ಟಿಸುತ್ತಿದ್ದಳು. ಲಕಲಕಾಂತ ಬಂದು ನಗಿಸಿ ಉತ್ಸಾಹ ಕೆರಳಿಸಿ ಹೋಗುತ್ತಿದ್ದಳು. ಮತ್ತೆ ಮೂರು ತಿಂಗಳು ಅವಳು ಬರೋ ತನಕವೂ ನೆನಪಿನಲ್ಲಿ ಉಳೀತಿತ್ತು ಅವಳ ನಗೆಯ ಮಿಂಚು, ಮಾತಿನ ಮೋಡಿ, ನಡೆಯ ಬೆಡಗು, ಚಟುಕಿನ ಚುರುಕು.

ಕೊರವಂಜಿ ಮಾತು ನಾನಾ ತರ. ಒಂದೊಂದು ಕೇಳಿದ ಕೂಡಲೇ ಕಚಗುಳಿ ಕೊಡುತ್ತಿದ್ದವು. ಇನ್ನು ಕೆಲವು ಪೂರಾ ಓದಿದ ಮೇಲೆಯೇ ಪರಿಣಾಮಕಾರಿ. ಮತ್ತೆ ಕೆಲವಂತೂ ಓದಿ ಮತ್ತೆ ಓದಿದ ಮೇಲೆಯೇ ಬುರಡೆಗೆ ಏರುತ್ತಿದ್ದುದು. ಓದಿ ಎಷ್ಟೋ ಹೊತ್ತಿನ ಮೇಲೆ ಏನೋ ನೆನಪು ಹೊಡೆದ ಹಾಗೆ ಆಗಿ ಪಕಪಕ ನಗು ಬರುತ್ತಿತ್ತು. ಅವಳ ಕಣ್ಣಿನ ನೋಟ ಹುಬ್ಬಿನ ಡೊಂಕು ಮೂರ್ತಿ ಪುಲಕ ಹಾಡಿನ ಜೋಕು ನಡಿಗೆಯ ಠೀಕು ಎಲ್ಲ ವಿಶಿಷ್ಟವೇ. ನಮ್ಮ ಕನ್ನಡಮ್ಮನ ಮನೆಯ ಬೆಡಗಿನ ಮಗಳು ಕೊರವಂಜಿ, ಕಣಿ ಹೇಳಿ, ಕತೆ ಹೇಳಿ, ಉರಿಗಾಳು ಕೊಟ್ಟು, ಕುಹಕಿಡಿ ಹಾರಿಸಿ, ಕೊರವಣ್ಣನ ಅವಲೋಕನ ಹೇಳಿ, ಬಲಿತವರಿಗೆ ನೀತಿಯ ಕಣಿ ಹೇಳಿ, ಕತೆ ಹೇಳಿ, ಲಕ್ಷ್ಮಣರ ವಿಲಕ್ಷಣ ಚಿತ್ರ ತೋರಿಸಿ ಹೊಸಗಾಲದ ಗಾದೆ ಹೇಳಿ, ಅಣಕ ಮಾಡಿ ಮರುಳು ಮಾಡುತ್ತಿದ್ದಳು ಕೊರವಂಜಿ! ಅವಳ ಬುಟ್ಟಿಯಲಿ ಎಷ್ಟೋ ಬಾಣ ಹೂಬಾಣ ಛೂಬಾಣ ಕುಹಕಿಡಿ ಉರಿಗಾಳು ಚಿನಕುರುಳಿ ಪಟಾಕಿ ಆನೆಪಟಾಕಿ ಏನೇನೋ! ತಿಳಿನಗೆ ಹಾಸ್ಯವಿಡಂಬನೆ, ಟೀಕೆ ಕುಹಕ ಚೇಷ್ಟೆ ಸರಸಸಲ್ಲಾಪ, ಆದರೆ ಅವಳ ಹತ್ತಿರ ಗಡಾಬಾಜು ಅಟಂಬಾಂಬು ಇಲ್ಲ ಅವಳ ನಗೆ ಎಡೆಎಡೆ ಒಡಕೊಂಡು ಬಿದ್ದು ಬಿದ್ದು ನಗೋದಲ್ಲ ಇನ್ನೂ ಹುಟ್ಟದೇ ಇರೋ ವಿವೇಕದ ಹಲ್ಲನ್ನು ತೋರಿಸಿ ನಗೋದಲ್ಲ ತಿಳಿನಗೆ ಅವಳದು! ಬದುಕಿನ ಬವಣೆ ನಮ್ಮ ಮುಖದ ಮೇಲೆ ಹಾಕುವ ಗಂಟುಗಳನ್ನು ತನ್ನ ಮಾತಿನ ಮಲಕಿನಿಂದ ಬಿಚ್ಚುವುದು ಕೊರವಂಜಿಯ ಕೆಲಸ! ಮುಖದ ಮೇಲೆ ತಿಳಿನಗು ಮನಸ್ಸಿನ ಮೇಲೆ ಅರಿವಿನ ತಿಳಿಬೆಳಕು ಆತ್ಮಕ್ಕೆ ಆನಂದದ ತಿಳಿವು, ಇದು ಅವಳ ಗುರಿ, ಕನ್ನಡದಲ್ಲಿ ಹಾಸ್ಯಕ್ಕೆ ಒಂದು ಗೂಡು ಕಟ್ಟಿಕೊಟ್ಟಳು ಕೊರವಂಜಿ! ಎಳೇ ಹುಡುಗಿ ಮಣ್ಣಲ್ಲಿ ಆಡತಾಳೆ, ಗೂಡು ಕಟ್ಟುತ್ತಾಳೆ ಮನೆ ಆಟ ಆಡುತ್ತಾಳೆ ಆಟದ ಸಂಸಾರ ನಡೆಸುತ್ತಾಳೆ, ಪೂಜೆ ಮಾಡುತ್ತಾಳೆ, ಹಾಡು ಹೇಳತಾಳೆ! ಹಾಗೇ ಈ ಕೊರವಂಜಿ ತುಂಬಾ ಚುರುಕು, ಹಾಸ್ಯದ ಆಟ ತೋರಿಸಿದಳು, ಹಾಸ್ಯದ ಒಂದು ಗೂಡು ಕಟ್ಟಿಕೊಟ್ಟಳು.

ಕೊರವಂಜಿ ಹುಟ್ಟಿ ಇಪ್ಪತ್ತೈದು ವರ್ಷ ಆಯಿತಂತೆ. ಅವಳು ಹುಟ್ಟಿದಾಗ ಭಾರತಮಾತೆ ಇನ್ನೂ ಸೆರೆಯಲ್ಲೇ ಇದ್ದಳು. ಯುದ್ಧದ ಹಾವಳಿ ಬೇರೆ ಆ ಗೊಂದಲದ ನಡುವೆನೇ ಕೊರವಂಜಿ ಕೂಸು ಕಿಂ ಅಂದೇ ಬಿಟ್ಟಳು! ಒಂದೇ ಗಳಿಗೆ ಅತ್ತದ್ದು ಹುಟ್ಟೋವಾಗ! ಆಮೇಲೆಲ್ಲ ನಗುವೇ! ಮೂರು ತಿಂಗಳಿಗೆ ಮೊಗಚಿಕೊಂಡಳು, ಆರು ತಿಂಗಳಿಗೆ ಎದ್ದು ಕೂತಳು. ವರ್ಷಕ್ಕೆ ಓಡಾಡಿಯೇ ಬಿಟ್ಟಳು. ಯುಗಾದಿ ಹಬ್ಬ ವರ್ಷದ ಹೆಚ್ಚು ಹೊಸ ಬಣ್ಣದಬಣ್ಣದ ಲಂಗತಿಂಗಿ ಹಾಕಿಕೊಂಡು ಹೂ ಮುಡಿದುಕೊಂಡು ಬೇವು ಬೆಲ್ಲ ತಿಂದು ಒಬ್ಬಟ್ಟು ನೈಕತಾ ಓಡಾಡುತ್ತಿದ್ದರೆ ಕೊರವಂಜಿ ಮನೆ ತುಂಬಿತು. ಮನಸ್ಸೂ ತುಂಬಿತು ಸಾಕು ತಂದೆ ರಾಶಿ ಕತೆ ಹಾಡು ಹೇಳಿಕೊಟ್ಟ ನಾ. ಕ. ದೀಕ್ಷಿತ್, ರಾಮು, ಕಾರಂತ ಜಿ. ಪಿ. ಇತ್ಯಾದಿ ಎಲ್ಲರಿಗೂ ಎಷ್ಟು ಖುಷಿಯೋ! ಚಿತ್ರ ಬರೆದುಕೊಟ್ಟ ಲಕ್ಷ್ಮಣ್‌ಗೂ ಆನಂದ. ಆ ಮಗೂ ಕಣೀನ ಕತೇನ ಹಾಡನ್ನ ಕೇಳಿ, ಅವಳ ಆಟ ನೋಡಿ ನಕ್ಕುನಲಿದ ಆ ಜನಕ್ಕೂ ಖುಷಿನೋ ಖುಷಿ! ಹೀಗಿತ್ತು ಆ ಕಾಲ.

ಬೆಳೆದಳು ಕೊರವಂಜಿ, ಹೊಸ ತರಾ ಲಂಗ ಬಂತು ಆ ವೇಳೆಗೆ ನಮ್ಮ ದೇಶವೂ ಸ್ವತಂತ್ರವಾಯಿತು. ಕೊರವಂಜಿಗಂತೂ ಸಂತೋಷವೊ ಸಂತೋಷ! ತನ್ನ ಆನಂದಾನ ಎಲ್ಲರಿಗೂ ಹಂಚಿಕೊಟ್ಟಳು ಸ್ವಾತಂತ್ರ್ಯದ ಜೊತೇಲೆ ನಾವೆಲ್ಲ ನಮ್ಮ ಬುದ್ಧಿಗೂ ನಮ್ಮ ನೀತಿ ನೇಮಕ್ಕೂ ಸ್ವಾತಂತ್ರ್ಯ ಕೊಟ್ಟುಬಿಟ್ಟೆವಲ್ಲ "ಹೋಗಿ ನಮಗೆ ನಿಮ್ಮ ಅಗತ್ಯವಿಲ್ಲ ನಿಮಗೆ ನಮ್ಮ ಅಡ್ಡೀನೂ ಬೇಡ" ಅಂತ ದೂರ ಕಳಿಸಿಬಿಟ್ಟೆವಲ್ಲ ಕೊರವಂಜಿ ಬೆಳೀತಾ ಇದ್ದಳು, ಇದನ್ನೆಲ್ಲ ಗಮನಿಸಿದಳು, ಆಗಾಗ ಛೂಬಾಣ ಬಿಡತಾ ಇದ್ದಳು, ಸರಿ ನಿಜವಾದ ಬಾಣ ಬಂದರೂ ನಮಗೇನೂ ನಾಟೋದಿಲ್ಲ, ಇನ್ನು ಹೆಣ್ಣು ಮಗಳ ಮಾತಿನ ಬಾಣ ನಾಟೀತೆ ನಮ್ಮ ಒರಟು ಬುದ್ಧೀಗೆ! ಆದರೂ ಕೊರವಂಜಿ ಸೋಲಲಿಲ್ಲ ಗೆಲುವಾಗೇ ಇದ್ದಳು ನಗತಾಲೇ ಇದ್ದಳು ನಗೋ ಯೋಗ್ಯತೆ ಇದ್ದವರನ್ನೆಲ್ಲ ನಗಿಸತಾಲೇ ಇದ್ದಳು.

ಅಳುವೇ ಹೇಗೆ ಶಾಶ್ವತ ಅಲ್ಲವೊ, ನಗೂನೂ ಹಾಗೇ! ಸದಾ ನಗತಾಲೇ ಇರತಾರೆಯೆ ಯಾರಾದರೂ! ಎರಡೂ ಇದ್ದೇ ಇವೆ ಒಂದರ ಹಿಂದೆ ಇನ್ನೊಂದು ಆದರೆ ಅಳು ಬಂದಾಗಲೂ, ಮರೆತು, ನಗೆತನವನ್ನು ಉಳಿಸಿಕೊಳ್ಳುವುದು, ನಗೆಯ ಫ್ಯಾನ್ ತಿರುಗಿಸಿ ಧಗೆ ಕಡಮೆ ಮಾಡಿಕೊಳ್ಳುವುದು ಜಾಣತನ! ಅದನ್ನೇ ಕಲಿಸಿಕೊಟ್ಟಳು ಕೊರವಂಜಿ ಈ ತನಕ.

ಕೊರವಂಜಿ ಅತ್ತದ್ದು ಉಂಟೇ? ಉಂಟು. ಆದರೆ ಒಂದೇ ಸಲ ಒಂದೇ ಒಂದು ಸಲ. ಅವಳು ಅಳುಮೂಂಜಿ ಆಗಿದ್ದಳು ಆ ದೇಗ್ಗಳಲರಲ್ಲಿ ನಮ್ಮ ದೇಶಾನ ಅಳು ಮುಖದಲ್ಲಿ ಒಂದು ಧೈರ್ಯ ಒಂದು ನಗೆ ಮಿಂಚಿಸಿದನಲ್ಲ ತಾತ ಬಾಪೂ, ಆ ತನ್ನ ನಾವು ನಮ್ಮಲ್ಲಿ ಇರಬೇಡ ಅಂತ ಕಳಿಸಿಬಿಟ್ಟೆವಲ್ಲ ಆಗ! ಕೊರವಂಜಿ ಇನ್ನೂ ಹುಡುಗಿ ಆದರೂ ದೊಡ್ಡವರ ಮೇಲ್ಪಂಕ್ತಿ! ಕರೀ ಲಂಗ ಹಾಕಿಕೊಂಡು ಕಣ್ಣೀರು ಸುರಿಸುತಾ ಬಂದಿದ್ದಳು. ಆ ಅಳುವಿನಲ್ಲೂ ಅವಳದೇ ಒಂದು ಠೀಕು, ಒಂದು ರೀತಿ! ಮತ್ತೆ ಚಾಚಾ ನೆಹರೂ ಹೋದಾಗ, ತಾತ ವಿಶ್ವೇಶ್ವರಯ್ಯ ಹೋದಾಗ, ಶಾಸ್ತ್ರಿಗಳು ಹೋದಾಗಲೂ ಕೊರವಮ್ಮನಿಗೆ ನೋವಾಗಿತ್ತು.

ಈಗ ಕೊರವಂಜಿ ಬೆಳೆದ ಹೆಣ್ಣು. ಇಪ್ಪತ್ತೈಪ್ರಾಯ. ಸ್ವಾತಂತ್ರ್ಯ ಬಯಸುತ್ತಾಳೆ. ದರಸಾಕುತಂದೆಗೆ ಇನ್ನು ಹೆಚ್ಚು ಭಾರವಾಗಬಾರದು ಅಂತ ಅವಳ ಮನಸ್ಸು. ಬೇರೆ ಯಾರೂ ಅಕೆಯ ಕೈ ಹಿಡಿಯಲಿಲ್ಲ. "ಊರಿಗೆ ಬೇಡವಾಗಿದೇನಿ ನಾನು. ಕಾಡಿಗೆ ಹೊರಟು ಹೋಗತೀನಿ. ಈ ಧಗೆ ಈ ಹೊಗೆ ತುಂಬಿದ ಊರಿಗಿಂತ ಆ ಕಾಡಿನ ಬೆಟ್ಟ ಗುಡ್ಡ ಮರ ಗಿಡ ಹುಲಿ ಚಿರತೆ ಅವೇ ಮೇಲು" ಅಂತ, ಕಣ್ಣಿಗೆ ಕಾಡಿಗೆ ಹಚ್ಚಿಕೊಂಡು ಹೊರಟು ನಿಂತಿದ್ದಾಳೆ ಕೊರವಂಜಿ.

ಬೇಡ ಅನ್ನೋದಕ್ಕೆ ಆಗಿಲ್ಲ ತಂದೇಗೆ! ಹೋದ ವರ್ಷವೇ ಕಳಿಸಿಬಿಡಬೇಕು ಅಂದುಕೊಂಡಾಗ ನೆರೆಹೊರೆಯವರು "ಬೇಡಿ ನಾವು ಕುಮ್ಮಕ್ಕು ಕೊಡುತ್ತೇವೆ" ಅಂದರು. ಈಗ ಇನ್ನು ಸಾಧ್ಯವಿಲ್ಲ ಅನ್ನುವ ಪರಿಸ್ಥಿತಿ ಬಂದಿದೆ ಹೋದ ಮಾರ್ಚಿ ತಿಂಗಳಲ್ಲಿ ಕೊರವಂಜಿ ಕೊನೆಯ ನಮಸ್ಕಾರ ಹೇಳಿದ್ದಾಳೆ, ಸಾಕು ತಂದೆ, ರಾಶಿ ಹಿರಿಯರು ಶ್ರೀರಂಗ, ಗೆಳೆಯರು ಅರಾಸೇ ದಾಶರಥಿ ದೀಕ್ಷಿತ್, ರಾವಿ, ಅಕ್ಕ ಸುನಂದಮ್ಮ ಎಲ್ಲರೂ ಕಳಿಸಿಕೊಟ್ಟಿದ್ದಾರೆ, "ಕಾಗದ ಬರೀತಿರಮ್ಮಾ" ಅಂತ ಹೇಳಿದಾರೆ. ಶ್ರೀರಂಗರಂತೂ "ತಿಂಗಳು ತಿಂಗಳಿಗೆ ಅಲ್ಲವಾದರೂ ಕೊನೇ ಪಕ್ಷ ಮೂರು ತಿಂಗಳಿಗೊ ಆರು ತಿಂಗಳಿಗೊ ಇಲ್ಲವೆ ವರ್ಷಕ್ಕೆ ಒಮ್ಮೆಯೊ ಬಂದು ಹೋಗಮ್ಮಾ, ಮರೆಯಬೇಡ." ಅಂತ ಹೇಳಿದ್ದಾರೆ. ಹಾಗೇ ಆಗಲಿ ಅಂತ ನಮ್ಮೆಲ್ಲರ ಎದೇನೂ ಬೇಡಿಕೊಳ್ಳುತಾ ಇದೆ.

ಕೊರವಂಜಿ ಹೋಗತಾಳೆ, ಅಲ್ಲಿ ಹೋಗಿ ಬರತಾಳೆ. ನೆನಪು ಹೋದೀತೇ? ಅವಳು ಹೊಸ ಗಾದೆಗಳು, ಹಾಡುಗಳು 'ಕಾದಿರುವಳು ಗೌರಿ' "ನಿಮ್ಮ ಮನೆಯಂಗಳದಿ ಬೆಳೆದೊಂದು ಹೈದನ್ನ" "ಅವನಿದ್ದದ್ದು ನಾನಾದದ್ದು" 'ಕೂಷ್ಮಾಂಡ ಪುರಾಣ', "ವೈಮರಿತ ಮಾದನ ಸಾಹಸಗಳು", "ಲೀಷನ್ ಆಫೀಸರ್ ಮಗಾ ಕಾಣೊ!" ಅನರ್ಥ ಕೋಶ, ನೀತಿ ಕತೆಗಳು, ಗಾಂಪರ ಗಲಾಟೆ, ದೇರಜ್ಞೋರ ದಫೇದಾರಿಕೆ, ಮುಗಿಲು ಹಳ್ಳಿಯ ಮಹಾತ್ಮೆ, ಒಂದೇ ಎರಡೇ ಮರೆಯುವುದು ಹೇಗೆ ತಾನೇ ಸಾಧ್ಯ!

ಅಂತೂ ಏಪ್ರಿಲ್ ತಿಂಗಳಿಂದ ಕೊರವಂಜಿ ಬರಲಿಲ್ಲ! ಒಂದನೇ ತಾರೀಕು ಬರಿದೋ ಬರಿದು!

ಕಾಡಿಗೆ ಹೊರಟಳು ಕೊರವಂಜಿ.
ಊರಿಗೆ ಇನ್ನೇನು ಅಳುಮೂಂಜಿ.
ಹೇಗೋ ಸಿಕ್ಕೀತು ಉಪ್ಪು ಗಂಜಿ.
ಹೇಗೆ ಸಿಕ್ಕೀತು ನಗೆ ಅಪರಂಜಿ.

—ಕನ್ನಡನುಡಿ




## ಪ್ರತ್ಯೇಕ ಮಹಿಳಾ ಪ್ರಾಂತ ರಚನೆಯಾಗಲಿ

"ಕುಟುಂಬ ಯೋಜನೆಯನ್ನು ವಿಧಾಯಕ ರೀತಿಯಲ್ಲಿ ಕೈಗೊಳ್ಳುವ ಸಲುವಾಗಿ ಇನ್ನು ಮುಂದ ಮದುವೆಗಳನ್ನು ಬಹಳ ತಡವಾಗಿ ಮಾಡುವಂತೆ ಪ್ರಯತ್ನ ಮಾಡಲಾಗುತ್ತದಂತೆ."

"ಪ್ರಯತ್ನ ಮಾಡಿದರೆ ಸಾಲದು; ಕಾಯಿದೆ ರೀತ್ಯಾ ಅದನ್ನು ತರಬೇಕು...."

"ನೀನು ಕೂಡಾ ಬಹಳ ಮುತುವರ್ಜಿ ವಹಿಸಿದ ಹಾಗೆ ತೋರುತ್ತದೆ...."

"ಇಲ್ಲದಿದ್ದರೂ ಹೆಚ್ಚು ಮಕ್ಕಳಿರಬಾದು. ಅವುಗಳನ್ನು ಯೋಗ್ಯ ರೀತಿಯಲ್ಲಿ ನಡೆಸಿಕೊಂಡು ಹೋಗುವದು ಬೇಡವೇ? ವಿದ್ಯಾಭ್ಯಾಸ ನೀಡುವದು ಬೇಡವೇ?"

"ಆದರೆ ಹೆಚ್ಚು ಮಕ್ಕಳಾದರೆ ಅವುಗಳೆಲ್ಲ ನೌಕರಿಗೆ ಸೇರಿ ಹೆಚ್ಚು ಸಂಪಾದನೆ ಮಾಡಿ ಸಂಸಾರಕ್ಕೆ ನೀಡುವರಲ್ಲವೇ? ಇಳಿ ವಯಸ್ಸಿನಲ್ಲಿ ಮಕ್ಕಳಿಂದ ನೆರವು ಸಿಗುವದಲ್ಲವೇ?"

"ಇದೇ ನಿಮ್ಮಲೆಕ್ಕಾಚಾರ ತಪ್ಪೆಂತ ಹೇಳುತ್ತೇನೆ. ಕಲಿತಂಥ ಮಕ್ಕಳಿಗೆ ಕೆಲಸ ಸಿಗುತ್ತೆಂತ ಹೇಳುವ ಗ್ಯಾರಂಟಿಯೇನೂ ಇಲ್ಲ. ಅವುಗಳಿಗೆ ಊರೆಲ್ಲ ಸಾಲ ಮಾಡಿ ಕಲಿಸಿದ್ದೇ ಬಂತು. ಆ ಸಾಲದ ಹೊರೆ ತಂದೆ ತಾಯಿಗಳ ಮೇಲೆ. ವಿದ್ಯಾಭ್ಯಾಸಕ್ಕೂ ಕೆಲಸ ಸಿಗುವ ವರೆಗೆ ಅವರ ಪೋಷಣೆಗೂ ಮಕ್ಕಳ ಹಿರಿಯರೇ ನೋಡಬೇಕು ತಾನೆ! ಒಂದು ವೇಳೆ ಕೆಲಸ ಸಿಕ್ಕಿದರೂ ಮಕ್ಕಳ ಖರ್ಚಿಗೇ ಆಗುತ್ತೆ. ಅದರಿಂದ ತಂದೆ ತಾಯಿಗಳಿಗೆ ಹೊಟ್ಟೆ ತುಂಬಿಸುವದುಗಲೀ ಅಷ್ಟರಲ್ಲಿಯೇ ಇದೆ."

"ನೀನು ಬಹಳ ದೂರ ಆಲೋಚನೆ ಮಾಡಿರುವೆಯಲ್ಲ!"

ಈಗಿನ ಪರಿಸ್ಥಿತಿಯಲ್ಲಿ ಯಾರಾದರೂ ಬಹಳ ದೂರ ಆಲೋಚನೆ ಮಾಡಬೇಕಾದ್ದೇ........"

"ತಡವಾಗಿ ಮದುವೆ ಮಾಡುವದರಿಂದ ಸಮಸ್ಯೆ ಬದಲಾಗಬಹುದೆನ್ನುವೆಯಾ?"

"ಸಮಸ್ಯೆ ಸಂಪೂರ್ಣವಾಗಿ ಬದಲಾಗದೆ ಇದ್ದರೂ ಸ್ವಲ್ಪ ಮಟ್ಟಿನ ಸಹಾಯವಾಗುತ್ತದೆ...."

"ಇಲ್ಲೇ ನೀನು ತಪ್ಪಿರೋದು! ತಡವಾಗಿ ಮದುವೆಯಾದರೆ ಆ ವರೆಗೆ ದವ್‌ಕಟ್ಟಿ ಕೂತಿರೋದ್ರಿಂದ ಒಂದಕ್ಕೆ ಡಬ್ಬಲ್ ಆಗುವದಿದೆ...."

"ನೀವು ಪ್ರತಿಯೊಂದಕ್ಕೂ ತಮಾಷೆ ಮಾತ್ನಾಡ್ತಾ ಇದ್ದೀರಿ...."

"ಅಲ್ಲ ಇದ್ದ ಸಂಗತಿಯನ್ನು ಹೇಳ್ತಾ ಇದ್ದೇನೆ. ಎಷ್ಟೋ ಜನ ತಡವಾಗಿ ಮದುವೆಯಾಗಿ ಜೋರಾಗಿ ಪ್ರೊಡಕ್ಷನಿಗೆ ಪ್ರಯತ್ನಿಸಿ ಅವಳಿ ಜವಳಿ ಆಗಿರೋಗನ್ನು ಕಂಡಿದ್ದೇನೆ"

"ಅಲ್ಲಿ-ಇಲ್ಲಿ ಇಂಥ ಒಂದು ನಿದರ್ಶನವಿದ್ದರೆ ಎಲ್ಲ ಕಡೆಯಲ್ಲೂ ಹಾಗಾಗಬೇಕೆಂದಿಲ್ಲ...."

"ಅದು ಸರಿಯೇ ಅನ್ನು....ಆದರೆ ಸರಕಾರ ಹೀಗೆ ಮಾಡುವದಕ್ಕಿಂತ ಇನ್ನೂ ಒಂದು ಹೆಜ್ಜೆ ಮುಂದೆ ಹೋಗುವದು ಹಿತ...."

"ಏನದು ಹೊಸ ವಿಧಾನ?...."

"ಎಷ್ಟು ತಡವಾಗಿ ಮದುವೆಯಾಗುತ್ತಾರೋ ಅಷ್ಟು ಕಾಲ ವರ್ಷ ವರ್ಷಕ್ಕೆ ಇಂತಿಷ್ಟು ವರ್ಷಾಸನ—ಎಂದು ನಿಯಮಿಸಬೇಕು. ಮದುವೆಯಾಗದೆ ಇರುವಂಥವರಿಗೆ ಅರ್ಥಾತ್ ಬ್ರಹ್ಮಚಾರಿ ಹಾಗೂ ಬ್ರಹ್ಮಚಾರಿಣಿಗಳಿಗೆ ಸಾಯುವ ವರೆಗೆ ಜೀವನಕ್ಕೆ ಆವಶ್ಯಕವಾಗಿರುವದನ್ನು ಸರಕಾರವೇ ವಹಿಸಿಕೊಳ್ಳಬೇಕು – ಹೇಗಿದೆ ಪ್ಲಾನು?"

"ನಿಮ್ಮ ಪ್ಲಾನು ಒಳ್ಳೆ ನಂದಿಬಟ್ಟಲ ಹೂವಿದ್ದ ಹಾಗಿದೆ. ಆದ್ರೆ ಏನು ಮಾಡೋಣ ನೀವು ಹುಟ್ಟಿದ್ದು ಬೇಗಾಯಿತು....ಸ್ವಲ್ಪ ತಡವಾಗಿ ಹುಟ್ಟಿದ್ದರೆ ಮತ್ತು ಮದುವೆಯನ್ನೇ ಮಾಡಿಕೊಳ್ಳದೆ ಇರುತ್ತಿದ್ದರೆ ಈ ಹೊತ್ತು ಬೀದಿ ಬಸವನ ಹಾಗೆ ಹಾಯಾಗಿ ಇರಬಹುದಾಗಿತ್ತು."

"ಬಸವನಿಗೆ ಹೋಲಿಸಬೇಡ್ವೇ? ನಾವೀಗ ಇರೋದು ಬಸವ ಸಂತಾನದ ಆಡಳಿತದಲ್ಲಿ. ಅದೂ ಕೂಡಾ ಈಗ ನಾಡಿನಲ್ಲೆಲ್ಲ ಬಸವ ಜಯಂತಿ ಆಚರಣೆ ನಡೆಯುತ್ತಿರುವಾಗ ಹಾಗೆ ಕಮ್ಮಿ ಮಾಡಿ ಮಾತನಾಡಬಾರದು...."

"ಏನೇ ಹೇಳಿ ಕುಟುಂಬ ಯೋಜನೆ"ಯನ್ನು ನಾನು ಅಕ್ಷರಶಃ ಅನುಮೋದಿಸುತ್ತೇನೆ...."

"ನಾನು ಕೂಡಾ ಅನುಮೋದಿಸುತ್ತೇನೆ. ಅಂಥ ಮೀಟಿಂಗಿನಲ್ಲಿ ನನ್ನೆರಡೂ ಕೈಗಳನ್ನು ಮೇಲೆತ್ತಿ ಅನುಮೋದಿಸುತ್ತೇನೆ...."

"ಓಹೋಹೋ ಉತ್ತರ ಕುಮಾರನ ಪೌರುಷಕ್ಕೇನೂ ಕಡಿಮೆಯಿಲ್ಲ. ರಾತ್ರಿಯಾದರೆ ಶುರುವಾಗುತ್ತೆ...."

"ಆದರೆ ನನಗೆ ಹೀಗೆ ಯೋಚನೆ ಹೊಳೀತಾ ಇದೆ...."

"ಏನದು ಹೊಸ ಯೋಚನೆ...."

"ಈಗ ಬೇರೆ ಬೇರೆ ಭಾಷಾ ಜನರಿಗೆ ಬೇರೆ ಬೇರೆ ಪ್ರಾಂತಗಳ ರಚನೆಯಾಗಿವೆಯಲ್ಲ. ಅಂತೆಯೇ ಈ ದೇಶದ ಜನಸಂಖ್ಯೆಯನ್ನು ಕಡಿಮೆ ಮಾಡೋ ಘನ ಉದ್ದೇಶದಿಂದ ಮಹಿಳೆಯರಿಗೆ ಪ್ರತ್ಯೇಕ ಪ್ರಾಂತ ರಚಿಸಿ ಮಹಿಳೆಯರೆಲ್ಲ ಮಹಿಳೆಯರ ಪ್ರಾಂತದಲ್ಲೇ ಇರಬೇಕು ಅಲ್ಲಿಂದ ಹೊರಬಾರದು–ಗಂಡಸರು ಆ ಪ್ರಾಂತಕ್ಕೆ

[ಹತ್ತನೇ ಪುಟ ನೋಡಿ]

ವಿಶ್ವ ವಿಖ್ಯಾತ ತತ್ವಜ್ಞಾನಿಯ ಕಥಾ ಪ್ರಹಸನಃ

ಬರ್ಟ್ರಾಂಡ್

# ದಿ ಇನ್‌ಫ್ರಾರೆಡಿ

## (The Infra

ಅನುವಾದ:

— ೨ —

ಇವರ ಗುಪ್ತ ಮಂಡಲದ ನಾಲ್ಕನೆಯ ಸದಸ್ಯ ಪೆಡ್ರೇರ್ ಮಾರ್ಕಲ್. ಇವರು ಮೂವರಿಗಿಂತ ತೀರ ಭಿನ್ನರು. ಸರ್ ಬುಲ್ಬಸ್ ಮತ್ತು ಸರ್ ಪಬ್ಲಿಯಸ್‌ರಿಗೆ ಈ ಆಸಾಮಿಯ ಪ್ರವೇಶಾರ್ಹತೆಯ ಮೇಲೂ ಸಂದೇಹವಿತ್ತು. ಆದರೆ ಅದನ್ನು ಸರ್ ಥಿಯೋ ಫಿಲಸರು ನಿವಾರಣೆ ಗೊಳಿಸಿದರು.

ಅವರ ಸಂಶಯ ನಿವಾರಣವಾಗಿರಲಿಲ್ಲ. ಯಾಕೆಂದರೆ ಉಳಿದ ಮೂವರಂತೆ ಈತ ಇನ್ನೂ ಸರ್ ಪದವಿಯನ್ನುಗಳಿಸಿದವನಲ್ಲ. ಈ ಅನರ್ಹತೆ ವಿನಹ ಅವನ ಮೇಲೆ ಬೇರೆ ದೊಡ್ಡ ಆಕ್ಷೇಪಗಳೂ ಇದ್ದುವು. ಅವನು ಬುದ್ಧಿವಂತನಲ್ಲವೆಂದು ಯಾರೂ ಅನ್ನುತಿದ್ದಿಲ್ಲ, ಆದರ ಗಟ್ಟಿ ಮುಟ್ಟಾಗಿದ್ದ ಜನರೆಲ್ಲ ಅವನೊಬ್ಬ "ಹುಚ್ಚ"ನೆಂದು ಸಂಶಯಪಡುತಿದ್ದರು. ಸರ್ವ ಸಾಮಾನ್ಯ ತರಗತಿಯ ನಾಗರಿಕನಾದ ಈತನ ಹೆಸರನ್ನು ಯಾವುದೇ ಕಾಗದ ಪತ್ರಗಳಲ್ಲಿ ನಮೂದಿಸಿದರೆ ಹಳ್ಳಿ ಪಳ್ಳಿಯ ಜನರು ಏನೆಂದು ತಿಳಿದಾರು? ಇಂತಹ ನೂಜ್ಞನಹೆಸರನ್ನು ಓದಿದ ಅವರು ಪಾಲು ([illegible]) ಗಳನ್ನು ಕೊಂಡಾರೇ?

ಸರ್ ಥಿಯೋಫಿಲಸ್‌ರು ಕೂಡಿಸಬೇಕೆಂದು ಆಗ್ರಹ ಮಾಡಿದರು. ಯಾಕೆಂದರೆ ಅವನ ತಲೆ ಮಿದುಳು ಅಸಮಾನ್ಯವಾಗಿತ್ತು. ನೂತನ ಶೋಧನೆಗಳಿಗೆ ತವರ್ಮನೆಯಾಗಿತ್ತು. ಅಲ್ಲದೆ ಈತ ಇತರ ವಿಜ್ಞಾನಿಗಳಂತಲ್ಲ, ವೈಜ್ಞಾನಿಕ ಸಂಶೋಧನೆಯಲ್ಲಿ ಪ್ರಾಮಾಣಿಕತೆ ಮತ್ತು ಸತ್ಯ ಆಧಾರವಾಗಿರಬೇಕೆಂಬ ಅಂಶವನ್ನು ಈತ ಸಂಪೂರ್ಣ ಕಡೆಗಣಿಸುತ್ತಿದ್ದನು.

ಹೆಚ್ಚೇಕೆ! ಮಾನವ ವರ್ಗದ ಮೇಲೆಯೇ ಅವನಿಗೆ ಅಸಮಧಾನವಿತ್ತು. ಆತನ ಚರಿತ್ರೆಯನ್ನು ತಿಳಿದವರು ಮಾತ್ರ ಈ ಸಂಗತಿಯನ್ನು ಬಲ್ಲರು. ಅವನ ತಂದೆ ನಿರೀಶ್ವರ ವಾದಿಗಳ ಬಂಗಡದಲ್ಲಿದ್ದರು! ಎಳೆ ಮಕ್ಕಳಿಗೆ ತಾಪವನ್ನು ಕೊಡುವದೇಕೆ? ಆ ತಾಪದಿಂದಾಗಿ ಮಕ್ಕಳೆಲ್ಲ ಹೆಣ್ಣು ಕರಡಿಗಳಿಂದ ಕತ್ತರಿಸಲ್ಪಟ್ಟುದು ಸರಿಯೇ-ಮುಂತಾಗಿ ಅವರು ಶಾಸ್ತ್ರ ಪುರಾಣ ಕತೆಗಳನ್ನು ನಿರ್ಧರಿಸಿ ಅವನ ತಲೆಯನ್ನು ಕೆಡಿಸಿದ್ದರು

ಪ್ರತಿಯೊಂದು ದೃಷ್ಟಿಯಿಂದಲೂ, ಆತನ ತಂದೆ ಹಳೆಯ ಕಾಲದ ಅವಶೇಷನಾಗಿದ್ದ. ಸಬ್ಬತ್ತಿನ ಮೇಲೆ ಅಗಾಧ ಅಭಿಮಾನ ಮತ್ತು ಹಳೆಯ ಮತ್ತು ಹೊಸ ಬ

ಡಂಬಡಿಕೆಗಳ ಮೇಲೆ ತುಂಬಾ ಸ್ವಾತಿ
ಅವನ ಮಾತುಕತೆಗಳೆಲ್ಲ ಈ ವಿಷಯಗಳ
ದಲೇ ತುಂಬಿದ್ದುವು, ಅವನ ಮಗ,
ಹುಡುಗ ಈಗಾಗಲೇ ಬುದ್ಧಿವಂತನಾಗಿದ್ದ
ಒಂದು ದಿನ ಯಾವುದೋ ಸಂದರ್ಭ ಸಿಕ
ದಾಗ ಅವಸರದಿಂದಲೇ ಅಪ್ಪನನ್ನು ಕೇ
ದ, ಮೊಲ, ಮೆಲುಕಾಡುವುದಿಲ್ಲ ಎಂ
ನಂಬಿದರೆ ಶ್ರೇಷ್ಠ ಕ್ರಿಶ್ಚಿಯನನಾಗಿ (ಕ್ರೈ
ಸ್ತ ಧರ್ಮ) ಬದುಕಲು ಸಾಧ್ಯವಿಲ್ಲವೇ?
ಎಂದು. ಅವನಪ್ಪ ಈ ಮಾತನ್ನು ಕೇಳಿ
ವರಿ ರೇಗಿದರು. ಮಗನನ್ನು ಎಷ್ಟರ ವರೆ
ಥಳಿಸಿದರೆಂದರೆ ಅವನಿಗೆ ಒಂದು ವಾರದ
ರೆಗೆ ಸರಿಯಾಗಿ ಕುಳಿತು ಕೊಳ್ಳಲು ಸಾ
ಧ್ಯವಾಗುತಿದ್ದಿಲ್ಲ.

ವಿಶ್ವ ವಿದ್ಯಾಲಯದಲ್ಲಿ ವಿಕ್ರಮ

ಇಷ್ಟೆಲ್ಲ ಜಾಗರೂಕತೆಯಿಂದ ಆತ
ಆಯ್ಕೆ ಮಾಡಿದ್ದರೂ, ಲಾಲನ ಪಾಲ
ನೋಡಿದ್ದರೂ, ಆತ ಮಾತ್ರ ಮಾತಾ ಪಿ
ಗಳ ಹೆಬ್ಬಯಕೆಯನ್ನು ಈಡೇರಿಸಲಿಲ್ಲ
ಕ್ರೈಸ್ತ ಧರ್ಮ ಪ್ರಚಾರಕ ಪಾದರಿಯ
ಗಲಿಲ್ಲ, ಕಾಲೇಜಿನಲ್ಲಿ ದೊರಕಿದ ಸ್ಕಾಲರ್
ಶಿಪ್ ನಿಂದಾಗಿ ಹೇಗೋ ಉನ್ನತ ಪದ
ಯನ್ನೆ ಪಡೆದು ಬಿಟ್ಟ

ಅವನ ಕಾಲೇಜಿನ ಮೊಟ್ಟ ಮೊದಲ
ಸಂಶೋಧನೆಯನ್ನು, ಆತನ ಪ್ರೊಫೆಸರ
ಕದ್ದು, ರಾಯಲ್ ಸೊಸೈಟಿಯ ಪ
ಕವನ್ನು ಪಡೆದರು. ಆತ ಸಂಗತಿಯನ
ಬಯಲಿಗೆಳೆದು ಫಿರ್ಯಾದಿ ಕೊಟ್ಟರ
ಇವನ ಮಾತನ್ನು ನಂಬಲಿಲ್ಲ. ಇ
ನೊಬ್ಬ ಮರ್ಯಾದೆ ಗೆಟ್ಟ ಪ
ನೆಂದೇ ದೂರಿದವರೆಲ್ಲ!

ಈ ಬೇಸರದ ಕಹಿ ಅನುಭವದ ದ
ಯಿಂದಾಗಿ ಮತ್ತು ಜನರ ಅಸಹಕಾ
–ಸಂಶಯಗಳಿಂದಾಗಿ ಅವನೊಬ್ಬ ಸಿ
ಕನ ಜನದ್ರೋಹಿಯಾದ. ಆದರೂ ತನ
ಶೋಧನೆ ಮತ್ತು ನವೀನ ರಚನೆಗಳನ
ಯಾರೂ ತಿಳಿಯಗೊಡದಂತೆ ಜಾಗ್ರ
ವಹಿಸಿದ.

ಇವನ ವಿಷಯದಲ್ಲಿ ಅನೇಕ ಕೆ
ಕತೆಗಳಿವೆ. ಅವ್ಯಾವೂ ದೃಢೀಕರಿಸ
ಟ್ಟಿಲ್ಲ. ಒಬ್ಬೊಬ್ಬರು ಒಂದೊಂದು
ನಾಗಿ ಅವನ ಕಡೆಯ ರೂಪರೇಷೆಗಳನ
ಕೊಡುತ್ತಾರೆ. ಆದರೆ ಅವೊಂದಕ್ಕೂ
ನಾದಿಯಿದ್ದಂತೆ ಕಂಡು ಬರುವುದಿ
ಅದು ಹೇಗಿದ್ದರೂ ಆತ ಬೇರಳ ಹ
ವನ್ನು ಸಂಪಾದಿಸಿದ್ದ. ಅವನದೇ ಆ
ಪ್ರಯೋಗ ಶಾಲೆಯನ್ನು ರಚಿಸಿದ್ದ ಇ

ರಸ್ಸೆಲ್ಲರ

# ಯೋ ಸ್ಕೋಪ್

## dioscope)

ಜಿ. ಹೆಗಡೆ

ರೊಳಗೆ ಅವನ ಪ್ರತಿಸ್ಪರ್ಧಿಗಳಾರಿಗೂ ಪ್ರವೇಶವಿಲ್ಲ. ಕಾಲಕ್ರಮೇಣ ಅವನ ಪ್ರಯೋಗ-ಶೋಧನೆ-ರಚನೆಗಳೆಲ್ಲ ಜನ ರಾಕರ್ಷಣೆಯನ್ನು ಪಡೆಯಲು ಪ್ರಾರಂಭಿಸಿದವು.

ಕಟ್ಟಕಡೆಗೆ ಸರಕಾರವೇ ಆತನನ್ನು ಆಮಂತ್ರಿಸಿತು. ಅವನು ತನ್ನ ವಿಶಿಷ್ಟ ಪಾಂಡಿತ್ಯ ಮತ್ತು ಅನುಭವವನ್ನೆಲ್ಲ "ಅಣು ಜೀವಿಗಳ ಹೋರಾಟ" (Bacterial warfare) ವ್ಯಯಿಸಬೇಕೆಂದು ವಿನಂತಿಸಿತು. ಆದರೆ ಈ ಬೇಡಿಕೆಯನ್ನು ಅವನು ತಿರಸ್ಕಾರದಿಂದ ನಿರಾಕರಿಸಿದ. ಅಣು ಜೀವ ಶಾಸ್ತ್ರದಲ್ಲಿ ತಮಗೇನೂ ಅನುಭವವಿಲ್ಲವೆಂದು ಅವನ ವಾದವಾಗಿತ್ತು. ಆದರೆ ಅದನ್ನು ಯಾರೂ ನಂಬುವಂತಿರಲಿಲ್ಲ. ಬಳಿಕ ಗೊತ್ತಾಯಿತು ಇದರ ಕಾರಣ. ಅವನಿಗೆ ಉನ್ನತ ಪ್ರಧಾನಿಯಿಂದ ಹಿಡಿದು, ಸಾಮಾನ್ಯ ಪಾಳದ ಪೋಲೀಸಿನವನನ್ನು ಕಂಡರೂ ಒಂದು ತರದ ರಾಗ ದ್ವೇಷ ಅಥವಾ ಜಿಗುಪ್ಸೆಯಿತ್ತು.

### ಬೆಲೆ ಬಾಳುವ ಪ್ರಯೋಗ ಶಾಲೆ

ವೈಜ್ಞಾನಿಕ ಕ್ಷೇತ್ರದಲ್ಲಿ ಪ್ರತಿಯೊಬ್ಬನೂ ಅವನನ್ನು ತುಚ್ಛೀಕಾರದಿಂದ ಕಂಡರೂ, ಯಾರಿಗೂ ಈತನನ್ನು ಆಪತ್ತು ಸಂಕಟಗಳಿಗೆ ಗುರಿಪಡಿಸಿ ಕೀಟಲೆಗೊಡ ಮಾಡುವ ಧೈರ್ಯವಿರಲಿಲ್ಲ. ಯಾಕೆಂದರೆ ಅವನು ಬಹಳ ಚತುರನಾಗಿದ್ದ. ಯಾವುದೇ ಕಠಿಣ ವಿಷಯವೊಂದನ್ನು ಕಟ್ಟಿ ಕೊಟ್ಟು ಅವನನ್ನು ಕಂಗಾಲು ಮಾಡಿದರೂ ಅವನು ಎದುರಾಳುಗಳೆದುರು ತಲೆ ಬಗ್ಗಿಸುವವನಲ್ಲ. ಬದಲಾಗಿ ಅವರೇ ಹುಚ್ಚರೆಂದು ಸಾರುವಷ್ಟು ಶಕ್ತಿ ಮತ್ತು ಯುಕ್ತಿ ಸಾಮರ್ಥ್ಯಗಳನ್ನು ಗಳಿಸಿದ್ದ. ಜೀವನದಲ್ಲಿ ಅವನಿಗೆ ಬೇಕಾದುದು ಏನೂ ಇಲ್ಲ. ಬೇಕಾದವರೂ ಯಾರೂ ಇಲ್ಲ. ಅವನ ಒಂದೇ ಒಂದು ಪ್ರಿಯವಾದ ವಸ್ತುವೆಂದರೆ ಅವನ ಖಾಸಗಿ ಪ್ರಯೋಗ ಶಾಲೆ ಮಾತ್ರ. ದುರಾದೃಷ್ಟದಿಂದ, ಅವನ ಸಲಕರಣೆಗಳಿಗೆಂದು ಅವನಿಗೆ ಅಪಾರ ವೆಚ್ಚ ತಗಲಿತು. ಆ ಸಾಲವನ್ನು ತೀರಿಸಲು, ಪ್ರಯೋಗ ಶಾಲೆಯನ್ನೇ ಮಾರಬೇಕಾದ ಪ್ರಸಂಗ ಅವನಿಗೆ ಬಂತು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಆತ ಎದ್ದು ಬಿದ್ದು ತೊಳಲಾಡುತ್ತಿರುವ ವೇಳೆ ಸರ್ ಥಿಯೋಫಿಲಸ್‌ರು ಅವನನ್ನು ಭೆಟ್ಟಿಯಾದುದು. ಅಂತಹ ಮಹಾ ಆಪತ್ತಿನಿಂದ ಬದುಕಿಸಲು ಒಂದೇ ಒಂದು ಉಪಾಯವಿದೆ. ಅವರ ಗುಪ್ತ ಕಮಿಟಿಯ ನಾಲ್ಕನೆಯ ಸದಸ್ಯನಾಗಲು ಒಪ್ಪುವುದು.

ಮಂಡಳದ ಮೊದಲ ಸಭೆಯ ಪ್ರಾರಂಭದಲ್ಲಿ ಸರ್ ಥಿಯೋಫಿಲಸ್‌ರು ತನ್ನ ಮನಸ್ಸಿನ ಇಂಗಿತವನ್ನೆಲ್ಲ ತಿಳಿಸಿದರು. ಮತ್ತು ಅವನ ಯಶಸ್ಸಿನ ಕುರಿತಾಗಿ ಇತರ ಸದಸ್ಯರ ಸಲಹೆ ಸೂಚನೆಗಳನ್ನು ಕೇಳಿದರು. ನಾಲ್ಕು ಜನರು ಒಟ್ಟು ಸೇರಿದಲ್ಲಿ— ಆ ಭಾಗ ಈ ಭಾಗವೆಂಬಿಲ್ಲ—ಯುರೋಪು ಅಮೇರಿಕಗಳೆಂದಿಲ್ಲ—ಇಡಿಯ ಜಗತ್ತನ್ನೇ ತಮ್ಮ ಸತ್ತೆಯೊಳಗೆ ತುರುಕಿ ತರಲು ಸಾಧ್ಯವಿದೆಯೆಂದು ಸೂಚಿಸಿದರು! ಅವರೆಲ್ಲರೂ ತಮ್ಮ ತಮ್ಮ ಚಾತುರ್ಯ ಮತ್ತು ಸಿಕ್ಕಿದ ಸಮಯಾವಕಾಶ ಸಂದರ್ಭಗಳನ್ನು ಸರಿಯಾಗಿ ಉಪಯೋಗಿಸುದಲ್ಲಿ ಯಾವ ತೊಂದರೆ—ತಗಾದೆಗಳೂ ಅವರನ್ನು ಪೀಡಿಸಲು ಶಕ್ಯವಿಲ್ಲ.

ತನ್ನ ಪ್ರಾರಂಭದ ಭಾಷಣದಲ್ಲಿ ಅವರು ಹೇಳಿದರು,

"ನಮಗೆ ಬೇಕಾದುದು ಒಂದು ಫಲದಾಯಕವಾದ ವಿಚಾರ. ಈ ವಿಚಾರಗಳ ಸರಬರಾಯಿ ಮಾರ್ಕಲ್‌ರ ಪಾಲಿಗಿರಲಿ. ಅದು ಒಳ್ಳೆಯ ವಿಚಾರವೆಂದಾದರೆ ನಾನು ಧನ ಸಹಾಯವನ್ನು ಒದಗಿಸುವೆನು. ಕಾರ್ವರ್ ಅದನ್ನು ಜಾಹೀರಾತುಗಳಿಂದ ಪ್ರಚಾರ ಪಡಿಸಲಿ ಇದನ್ನು ವಿರೋಧಿಸುವವರ ಕಾಮನೆಗಳನ್ನೆಲ್ಲ ಫ್ರುಟಜರ್ ಸಾರ್ವಜನಿಕ ಕ್ರೋಧಾಗ್ನಿಗೆ ಕರಳಿಸಿ ಮುರಿಸಲಿ.

ಮಾರ್ಕಲ್‌ಗೆ ಆ ವಿಚಾರವನ್ನು ಶೋಧಿಸಿ ತೆಗೆಯಲು ಸ್ವಲ್ಪ ಸಮಯ ಬೇಕಾಗಬಹುದು. ಆದರೆ ಆ ವಿಚಾರ ಒಮ್ಮೆ ಕರಗತವಾದರೆ ಪ್ರಪಂಚವೇ ಅದನ್ನು ಕಾರ್ಯಗತ ಮಾಡಿ ನೋಡಲು ಮುಂದೆ ಬರಲೂ ಬಹುದು. ಆದುದರಿಂದ ಈ ಸಭೆಯನ್ನು ಒಂದು ವಾರದ ವರೆಗೆ ಮುಂದುವರಿಸಲು ಸೂಚಿಸುವೆನು. ಈ ಅವಧಿಯೊಳಗೆ ವಿಜ್ಞಾನ ನಮ್ಮ ಸಮಾಜದ ಒಂದು ಪ್ರಮುಖ ಅಂಗವಾಗಿ ಸ್ಪರ್ಧಿಸಲು ಸಿದ್ಧವಾಗುವುದು.

ಇದಿಷ್ಟರಲ್ಲೇ ಮಿ. ಮಾರ್ಕಲ್‌ರತ್ತ ತಲೆ ಬಗ್ಗಿಸಿ, ಅವರು ಸಭೆಯನ್ನೂ ಮುಂದೂಡಿದರು.

ಅವರ ಗುಪ್ತ ಮಂಡಲದ ಸಭೆ ಒಂದು ವಾರದ ಬಳಿಕ ಪುನಃ ಕೂಡಿದಾಗ ಸರ್ ಥಿಯೋಫಿಲಸ್‌ರು ಮಾರ್ಕಲ್‌ರತ್ತ ಹಸನ್ಮುಖರಾಗಿ "ಜೆಂಟಲ್ಮನ್‌ರು, ಮಾರ್ಕಲ್-

(ಹತ್ತನೇ ಪುಟ ನೋಡಿ)




"ವಕೀಲ ವೃತ್ತಿ ಕಲಿಯುವದರ ಮೂಲಕ ಸ್ತ್ರೀಯರು ಗಂಡಸರಿಗಿಂತ ತಾವು ಎಷ್ಟು ಮಾತ್ರಕ್ಕೂ ಕಮ್ಮಿಯಿಲ್ಲವೆಂದು ತೋರಿಸಿ ಕೊಟ್ಟಿರುತ್ತಾರೆ"

ಉಡುಪಿ ಲಾ ಕಾಲೇಜಿನಲ್ಲಿ ಡಾ| ಮಾಧವ ಪೈಗಳ ಭಾಷಣ

—ಅಂತೂ ಬಾಯಿ ಜಾಸ್ತಿ ಇದ್ದವರು ಈ ಕೆಲಸಕ್ಕೆ ಲಾಯಕೆನ್ನುವದರಲ್ಲಿ ಸಂದೇಹವಿಲ್ಲ. ಹೆಂಗಸರಿಗೆ ಬಾಯಿ ಜಾಸ್ತಿಯಾಗಿರುವದರಿಂದಲೇ ಪಾರ್ವತಿ ಬಾಯಿ, ಗಿರಿಜಾ ಬಾಯಿ, ಸರಸ್ವತಿ ಬಾಯಿ, ಎಂದು ಕರೆಸಿಕೊಳ್ಳುತ್ತಲಿದ್ದಾರೆ.

೦೦೦ ೦೦ ೦೦

ಉಡುಪಿ ತಹಶಿಲ್ದಾರರನ್ನು ಇಲ್ಲಿಂದ ವರ್ಗಾಯಿಸುವದಿದ್ದರೂ ಅದು ಉಡುಪಿ ಕಾಂಗ್ರೆಸಿನವರ ಅರ್ಜಿಯ ಕಾರಣದ ಮೇಲಿಂದ ಆಗಕೂಡದೆಂದು ಉಡುಪಿ ಬೇಕರಿ ಓನರ್ಸ್ ಎಸೋಸಿಯೇಶನಿನ ಅಧ್ಯಕ್ಷ ಶ್ರೀ ಟಿ. ಎ. ವಾಸುದೇವನ್‌ರವರು ಶ್ರೀ ಲೋಜೋ ಪ್ರಭುಗಳ ಮುಂದೆ ಹೇಳಿದರಂತೆ!

—ಮಗಳು ವಿಧವೆಯಾದರೂ ಚಿಂತಿಲ್ಲ ಅಳಿಯನ ಚಂದ ನೋಡಿಯೇ ತೀರಬೇಕು ಎಂದ ಹಾಗಾಯಿತು.

೦೦೦ ೦೦ ೦೦

ಮೈಸೂರ ಮಂತ್ರಿಗಳೊಬ್ಬರು ಅವರ ಇಲಾಖೆಯ ಅಧಿಕಾರಿಗಳೊಬ್ಬರಿಗೆ 'ಯು ಆರ್ ಎ ಫೂಲ್' ಎಂದರಂತ

—ಈ ಫೇಮಿಲಿ ಪ್ಲೇನಿಂಗ್ ಸಮಯದಲ್ಲಿ 'ಲೂಪ್ ಲೂಪ್' ಎಂದು ಹೇಳಿ ಅಪ್ಪಿತಪ್ಪಿ ಫೂಲ್ ಎಂತ ಅವರ ಬಾಯಿಯಲ್ಲಿ ಬಂದಿತಬಹುದು!

೦೦ ೦೦ ೦೦

ಮೈಸೂರ ಆಹಾರ ಮಂತ್ರಿ ಶ್ರೀ ಬಿ. ಡಿ. ಜತ್ತಿಯವರು ಇದೇ ಸೆಪ್ಟಂಬರ ತಾ 10ರಿಂದ ತಾನು ಎಂಥ ಪರಿಸ್ಥಿತಿಯಲ್ಲೂ ಸಿಟ್ಟಿಗೇಳಲಾರೆನೆಂದು ಪ್ರತಿಜ್ಞೆಯನ್ನು ಸ್ವೀಕರಿಸಿರುತ್ತಾರಂತೆ!

—ಗಂಡಸಿಗೆ ಗರ್ವ ಭೂಷಣವಯ್ಯ— ಅದಿಲ್ಲದ ಹೋದರೆ ಜ.ವಿಯಿದ್ದೂ ತಿಂಬಲ್ಲ ದಂತಂಮುಳ್ಳಿದ್ದೂ ಅಧ್ಯಾಪಕರಿಲ್ಲದಂತೆ— ಆಸ್ಪತ್ರೆಯಿದ್ದೂ ಡಾಕ್ಟರಿಲ್ಲದಂತ

೦೦೦ ೦೦ ೦೦

ಮನುಷ್ಯ ಹುಟ್ಟಿ ಬರುವಾಗಲೂ ಹಾಗೂ ಮರಣದ ನಂತರವೂ ವಿವಸ್ತ್ರನಾಗಿಯೇ ಇರುತ್ತಾನೆಂದು ಕರಿಬಸಪ್ಪನವರು ಹೇಳಿದರಂತೆ

—ಇದು ಪೂರ್ತಿ ಸರಿಯಲ್ಲ. ಚುನಾವಣೆಯ ನಂತರ ಎಂ.ಪಿ. ಗಳೊಬ್ಬರನ್ನು ವಿವಸ್ತ್ರರನ್ನಾಗಿ ಮೆರವಣಿಗೆ ಮಾಡಿರುವ ನಿದರ್ಶನ ಈ ಕಾಂಗ್ರೆಸ್ ರಾಜ್ಯದಲ್ಲಿದೆ.

೦೦೦ ೦೦ ೦೦೦

ಶಾಸ್ತ್ರೀಯ ಸಂಗೀತದ ಮೂಲಕ ಜನ ಸಮೂಹವನ್ನು ಆಕರ್ಷಿಸಿಕೊಳ್ಳಲು ಸಾಧ್ಯವಿದೆ ವಿದ್ವಾಂಸರೊಬ್ಬರ ಭಾಷಣ.

—ಅಷ್ಟೇ ಅಲ್ಲ ಹಲವು ಸಂದರ್ಭಗಳಲ್ಲಿ ತಡೆಯಲಿಕ್ಕಾಗದ ಜನರನ್ನು ದೂರ ಕಳಿಸುವದಕ್ಕೂ ಇದು ಅನುಕೂಲವಾಗುತ್ತದೆ.

೦೦೦ ೦೦ ೦೦೦

ಪೋಪರ ವಾಸಪ್ರದೇಶವಾಗಿರುವ ವ್ಯಾಟಿಕನ್ ನಗರದ ಹಲವು ಭಾಗಗಳಲ್ಲಿ ತುಂಡು ಲಂಗ ಧರಿಸಿದ ಮಹಿಳೆಯರಿಗೆ ಪ್ರವೇಶವನ್ನು ನಿರ್ಬಂಧಿಸಲಾಗಿದೆಯಂತೆ.

—ಭಾರತದಲ್ಲಿದು ಸುಧಾರಣೆ ಹಾಗೂ ಸುಸಂಸ್ಕೃತ ಕುಟುಂಬದ ಲಕ್ಷಣವಾಗಿ ಮುಂದೆ ಬರುತ್ತಿರುವಾಗ ಹುಟ್ಟಿನ ಪ್ರದೇಶದಲ್ಲಿಯೇ ಅದಕ್ಕೆ ತಡೆ ಬೀಳುತ್ತಿರುವದು ಶೋಚನೀಯವಲ್ಲವೆ?

೦೦೦ ೦೦ ೦೦೦

ಉಡುಪಿಯ ಕಿರುದಾದ ರಸ್ತೆಗಳ ಪಕ್ಕದಲ್ಲಿ ನಳ್ಳಿನೀರಿನ ಸಂಪುಗಳನ್ನಿರಿಸುವ ಸಲುವಾಗಿ ಆಳವಾಗಿ ತೋಡಿರುವ ಹೊಂಡದಿಂದ ಶಾಲಾ ಮಕ್ಕಳಿಗೂ ವಾಹನ ಸಂಚಾರಕ್ಕೂ ತಡೆಯಾಗಿದೆಂದು ಹಲವರು ಅಕ್ಷೇಪವೆತ್ತಿರುವರಂತೆ.

—ಇದೇ ಅಕ್ಟೋಬರದಿಂದ ಮದ್ಯಪಾನ ಷೇಧ ಕಾಯಿದೆಯನ್ನು ಸಂಪೂರ್ಣವಾಗಿ ಕಿತ್ತು ಹಾಕುವದರಿಂದ ಗಡಂಗಿನಿಂದ ಮನೆಗೆಂದು ಹೊರಟವರು ಏನಾಗುತ್ತಾರೋ ಎಂದು ಭಯವಾಗುತ್ತೆ!

೦೦೦ ೦೦ ೦೦೦

ಜನನಿಯಂತ್ರಣಕ್ಕೆ ತಡವಾಗಿ ವಿವಾಹವಾಗುವದನ್ನು ಕಡ್ಡಾಯವಾಗಿಸುವದು ಅವಶ್ಯ" ಕುಟುಂಬ ಯೋಜನಾ ಸಭೆಯಲ್ಲಿ ಒಬ್ಬರ ಭಾಷಣ

—ಡೌರಿ ಕೊಡುವವರು ಅಷ್ಟು ಸಮಯ ಕಾದುಕೊಂಡು ಕೊಳ್ಳುತ್ತಾರೆಯೇ! ಅದು ಎಷ್ಟನ್ನಾಗಿ ಬುಕ್ಕಾಗಿರುತ್ತಲ್ಲ!

೦೦೦ ೦೦ ೦೦೪

"ಇಂದು ಸರಕಾರೀ ಯೋಜನೆಗಳಲ್ಲಿ ಕೋಟ್ಯಂತರ ರೂಗಳು ಸೋರಿ ಹೋಗುವದು ಮಾಮೂಲಾಗಿ ಬಿಟ್ಟಿದೆ"

ಕಾಮ್ರೇಡುಗಳೊಬ್ಬರ ಭಾಷಣ

—ಅದನ್ನೂ ಲೂಟಿ ಹಾಕುವ ವ್ಯವಸ್ಥೆಯಾಗುತ್ತಿದ್ದರೆ ಉತ್ತಮವಾಗಿರುತ್ತಿತಲ್ಲವೇ?

—ಪ್ರಚಂಡ

ಕಾರ್ಕಳ ಮುನ್ಸಿಫ್ ಕೋರ್ಟಿನಲ್ಲಿ

O S. No. 363/1966

RE No. 393/1967

ಸಿಂಡಿಕೇಟ್ ಬೇಂಕ್ ಲಿಮಿಟೆಡ್ ಮಣಿಪಾಲ ಇದರ ರಿಕವರಿ ಆಫೀಸರ್ U S ಭಂಡಾರಿ

ವಾದಿ ಅರ್ಜಿದಾರ

ಮತ್ತು

1. S. ಜಿನರಾಜ ಹೆಗ್ಡೆ 2. ಚಲುವಮ್ಮ

ಪ್ರತಿವಾದಿಗಳು ಎದುರಾಳು

ಸದರಿ ಅಮ್ಲಜಾರಿಯು 2ನೇ ಎದುರಾಳು ಚಲುವಮ್ಮ ಎಸ್. ಜಿನರಾಜ ಹೆಗ್ಡೆರ ಜೊತೆ ಕಾರ್ಕಳ ಕ್ಷಮಾದನಸಾಲೆ ಬಳಿಯಿರುವವಳಿಗೆ ಮೇಲ್ಕಂಡ ಅಮ್ಲಜಾರಿಯಲ್ಲಿ ನಿಮ್ಮ ಹಕ್ಕಿನ ಸ್ಥಿರಾಸ್ತಿ ಯೇಲಂ ಅಪೇಕ್ಷಿಸಿ ಅರ್ಜಿದಾರ ಬೇಂಕಿನವರು ದಾಖಲು ಮಾಡಿದ ಯೇಲಂ ಇಸ್ತಿಹರು ಮಂಜೂರು ಮಾಡುವ ಬಗ್ಗೆ ಮತ್ತು ದರ್ಖಾಸ್ತಿಗೆ ನಿಲ್ಲುವರೆ ಅನುಮತಿ ಮತ್ತು ದರ್ಖಾಸ್ತಿಗೆ ಕಂತಲ್ಲಿ ದರ್ಖಾಸ್ತು ಹಣ ಡಿಕ್ರಿಯ ಹಣದಲ್ಲಿ ಮಜ ಕೊಡಬೇಕಂತ ಕೊಟ್ಟ R E A No 467/67 ನೇ ಅರ್ಜಿಯ ತನ್ನಿಯ ಬಗ್ಗೆ ಮೇಲ್ಕಂಡ ಕೋರ್ಟಿನಲ್ಲಿ ತಾರೀಕು 4—10—1967 ನೇ ಬೆಳಿಗ್ಗೆ 10 ಗಂಟೆಗೆ ಇಟ್ಟಿರುವುದರಿಂದ ಸದರಿ ವಿಷಯಗಳಲ್ಲಿ ನಿಮ್ಮ ಉದಾಹರಣೆಯಿರುವಲ್ಲಿ ನೀವು ಸ್ವತಹ ಅಥವಾ ವಕೀಲರಮುಖಾಂತರ ಹಾಜರಾಗಿ ಜಾಹೀರು ಮಾಡಿಕೊಳ್ಳಬಹುದಾಗಿಯೂ ತಪ್ಪಿದ್ದಲ್ಲಿ ನಿಮ್ಮ ಗೈರುಹಾಜರಿಯಲ್ಲಿ ತೀರ್ಮಾನಿಸಲ್ಪಡುತ್ತದೆ ವೆಂಬುದಾಗಿ ಕೋರ್ಟು ಹುಕುಂಪ್ರಕಾರ ಈ ಮೂಲಕ ನಿಮಗೆ ತಿಳಿಯಪಡಿಸಲಾಗುತ್ತದೆ

S. Rajgopal Achar
Advocate for Petitioner

Karkala
ತಾ. 13—9—67

# ಸೆಪ್ಟೆಂಬರ್ 9- ಬಲ್ಗೇರಿಯಾ ಸ್ವಾತಂತ್ರ್ಯೋತ್ಸವ!

ಬಲ್ಗೇರಿಯಾದ ಇತಿಹಾಸದಲ್ಲಿಯೇ ಸೆಪ್ಟೆಂಬರ್ ಒಂಬತ್ತು ರಕ್ತಾಕ್ಷರಗಳಲ್ಲಿ ಕೆತ್ತಲ್ಪಡಬೇಕಾದ ದಿನ! 1944 ರ ಸೆಪ್ಟೆಂಬರ್ ಒಂಬತ್ತರಂದು ದಿಗ್ವಿಜಯ ಸಾಧಿಸಿದ್ದ ಸೋವಿಯತ್ ಸರಕಾರದ ಸಹಾಯ, ಅದರ ವಿಪುಲ ಸೈನ್ಯದ ಸಹಾಯದಿಂದ ಫ್ಯಾಸಿಸ್ಟ್ ಆಡಳಿತವನ್ನು ಬೇರು ಸಹಿತ ಕಿತ್ತೆಸೆದು, ದೇಶದಲ್ಲಿ ಪ್ರಜಾ ಸರಕಾರವನ್ನು ಸ್ಥಾಪಿಸಲಾಯಿತು.

ಬಲ್ಗೇರಿಯಾದ ಸ್ವಾತಂತ್ರ್ಯಗಳಿಸಿದಾಗ, ಅದು ತೀರಾ ಹಿಂದುಳಿದ ರಾಷ್ಟ್ರವಾಗಿದ್ದಿತು. ಯಾವ ದಿಶೆಯಲ್ಲಿ ತಿರುಗಿ ನೋಡಿದರೂ ಪ್ರಗತಿಯ ಸೂಚನೆಯೇ ಇರಲಿಲ್ಲ. ಹೇಳಿಕೊಳ್ಳುವಂತಹ ಕೈಗಾರಿಕೆಗಳಾವುವೂ ಅಲ್ಲಿರಲಿಲ್ಲ. ಭಾರತದಲ್ಲಿ ಈಗಲೂ ಇರುವಂತೆ ವ್ಯವಸಾಯವೆಂದರೆ ಮರದ ನೇಗಿಲು ಎದುರು ಬಂದು ನಿಲ್ಲುತಿತ್ತು. ಸಾಗುವಳಿಯಾಗಬೇಕಾದ ಭೂಮಿಯನ್ನು ಸಾವಿರ ಚೂರು ಮಾಡಿ ಒಂದೊಂದಕ್ಕೂ ಒಬ್ಬೊಬ್ಬ ಮಾಲೀಕನಿದ್ದ. ದೇಶದ ಆರ್ಥಿಕ ಪರಿಸ್ಥಿತಿಯನ್ನಂತೂ ಕೇಳಲೇ ಬೇಕಿರಲಿಲ್ಲ.

ಆ ಮಾತಾಗಿ ಈಗ 23 ವರ್ಷಗಳು ಕಳೆದಿವೆ. ಸಮಾಜವಾದೀ ಧ್ಯೇಯದಿಂದ ಕೂಡಿ ಮುಂದುವರಿಯುತ್ತಿರುವ 42000 ಚದುರ ಮೈಲುಗಳ ವಿಸ್ತೀರ್ಣದ, ಎಂಬತ್ತು ಲಕ್ಷ ಜನಸಂಖ್ಯೆಯುಳ್ಳ ಈ ಬಾಲ್ಕನ್ ದೇಶವು ಈಗ ತನ್ನ ಸಮಾಜವನ್ನೇ ಆಚ್ಚರಿ ಮಾಡಿಸುವ ತೆರದಲ್ಲಿ ಬದಲಾಯಿಸಿಕೊಂಡಿದೆ, ಕೇವಲ ಶೂನ್ಯದಿಂದಲೇ ಮೇಲೆದ್ದಿತೆನ್ನ ಬಹುದಾದ ಬಲ್ಗೇರಿಯಾ ಈಗ ಎದೆ ನಿಮಿರಿಸಿ ಹೇಳಿಕೊಳ್ಳುವಂತಹ ಕೈಗಾರಿಕೆಯನ್ನು ಪಡೆದಿದೆಯಲ್ಲದೆ 1939 ರಲ್ಲಿ ಯುದ್ಧಪೂರ್ವದಲ್ಲಿ ಉತ್ಪಾದಿಸುತ್ತಿದ್ದುದರ 25 ರಷ್ಟು ಹೆಚ್ಚಿನ ವಸ್ತುಗಳನ್ನು ಈಗ ಉತ್ಪಾದಿಸುತ್ತಿದೆ. ಸಹಕಾರ ಪದ್ಧತಿಯಲ್ಲಿ ನಡೆಸಲಾಗುತ್ತಿರುವ ಆದರ ಯಾಂತ್ರೀಕೃತ ವ್ಯವಸಾಯವು ಈಗ ಎರಡು ದಶಕಗಳ ಹಿಂದೆ ನೀಡುತ್ತಿದ್ದುದರ ಎರಡರಷ್ಟು ಫಲವನ್ನು ನೀಡುತ್ತಿದೆ.

ಜನ ಜೀವನದಲ್ಲಿಯೂ ಪ್ರಗಾಢ ಮಾರ್ಪಾಡುಗಳು ತೋರಿಕೊಂಡಿವೆ. ಅಲ್ಲಿ ಎಲ್ಲಾ ಮಟ್ಟಗಳಲ್ಲಿಯೂ ವಿದ್ಯಾಭ್ಯಾಸ ಉಚಿತವಾಗಿ ನೀಡಲ್ಪಡುತ್ತಿದೆ. ವೈದ್ಯ ಸಹಾಯ ಸಹಾ ಉಚಿತವೇ. ಇನ್ನೂ ಎಷ್ಟೋ ಸಾರ್ವಜನಿಕ ಸೌಕರ್ಯಗಳಲ್ಲೂ ಉಚಿತವೇ ಆಗಿದೆ. ಸಹಕಾರ ವ್ಯವಸಾಯದ ವಾಯಶಸ್ಸಿನಿಂದಾಗಿ ಗ್ರಾಮೀಣ ಜನರ ಜೀವನಮಟ್ಟವು ಬಹು ಮಟ್ಟಿಗೆ ಸುಧಾರಿಸಿದೆ ವಿದ್ಯುತ್ ಸೌಲಭ್ಯವಿಲ್ಲದ ಗ್ರಾಮವೇ ಅಲ್ಲಿಲ್ಲ. ಅಲ್ಲಿನ ಹಳ್ಳಿಗಳಲ್ಲಿ ಅರ್ಧಕ್ಕಿಂತ ಹೆಚ್ಚು ಮನೆಗಳನ್ನು ಹೊಸದಾಗಿ ನಿರ್ಮಿಸಲಾಗಿದೆ.

ಬಲ್ಗೇರಿಯಾ ಜನತೆಯು ತಾವು ಸಾಧಿಸಿರುವ ಪ್ರಗತಿಗೆ ತಮ್ಮ ಬೆನ್ನನ್ನು ತಾವೇ ತಟ್ಟಿಕೊಂಡು ಶಹಬ್ಬಾಸ್ ಗಿರಿಯನ್ನು ಕೊಟ್ಟುಕೊಳ್ಳುತ್ತಾ ಸುಮ್ಮನೆ ಕುಳಿತಿಲ್ಲ. ತಮ್ಮ ದೇಶವು ಅದ್ವಿತೀಯವಾಗಿರಬೇಕೆಂದು ಅಲ್ಲಿನ ಒಬ್ಬೊಬ್ಬ ಪ್ರಜೆಗೂ ಆಕಾಂಕ್ಷೆಯಿದೆ. ಬಲ್ಗೇರಿಯಾ ಈಗ ಐದನೆಯ ಪಂಚವಾರ್ಷಿಕ ಯೋಜನೆಯನ್ನು ಕೈಗೊಂಡಿದ್ದು, ಆದರಲ್ಲಿ ಸಹಾ 1980ರ ಅಂತ್ಯದ ವೇಳೆಗೆ, ಎಂದರೆ ಈ ಯೋಜನೆ ಮುಗಿಯುವಾಗ ಬಲ್ಗೇರಿಯಾ ಪೂರ್ಣ ಪ್ರಗತಿಯನ್ನು ಸಾಧಿಸಿದ್ದು, ಜಗತ್ತಿನ ಅತಿ ಹೆಚ್ಚಾಗಿ ಮುಂದುವರಿದಿರುವ ರಾಷ್ಟ್ರಗಳಲ್ಲಿ ಒಂದಾಗುವುದೆಂಬ ನಿರೀಕ್ಷೆಯನ್ನು ಹೊಂದಲಾಗಿದೆ.

ತಮ್ಮ ದೇಶದ ಪ್ರಗತಿಯ ಬಗ್ಗೆ ಪೂರ್ಣ ವಿಶ್ವಾಸ, ತಮ್ಮ ನಾಡಿಗಾಗಿ ಏನನ್ನೂ ತ್ಯಾಗ ಮಾಡಬಲ್ಲ ನಿಷ್ಠೆಗಳಿಂದ ಕೂಡಿದ ಬಲ್ಗೇರಿಯಾ ಪ್ರಜೆಗಳು ತಮ್ಮ ದೇಶದ 22ನೇ ಸ್ವಾತಂತ್ರ್ಯೋತ್ಸವವನ್ನು ಸಂಭ್ರಮದಿಂದ ಆಚರಿಸಲಿದ್ದಾರೆ!

### ಬಲ್ಗೇರಿಯಾದ ಆರ್ಥಿಕ ಮುನ್ನಡೆ

ಕೈಗಾರಿಕೆಗಳು ಅಗಣಿತ ಸಂಖ್ಯೆಯಲ್ಲಿ ಹುಟ್ಟಿಕೊಂಡದ್ದರಿಂದ ಯುದ್ಧಾನಂತರದ ಬಲ್ಗೇರಿಯಾದ ಆರ್ಥಿಕ ಪರಿಸ್ಥಿತಿಯಲ್ಲಿ ವಿಸ್ಮಯಕಾರಕ ಪ್ರಗತಿ ಕಾಣಬಂದಿದೆ 1966ರಲ್ಲಿ ಬಲ್ಗೇರಿಯಾದ ಕೈಗಾರಿಕಾ ಉತ್ಪನ್ನವು ಯುದ್ಧ ಪೂರ್ವದಲ್ಲಿ ಎಂದರೆ, 1339ರಲ್ಲಿ ಇದ್ದುದರ 24ರಷ್ಟು ಹೆಚ್ಚಾಗಿವೆ.

1939ರಲ್ಲಿ ಸೇಕಡಾ 23ರಷ್ಟು ಯಂತ್ರಗಳನ್ನೂ, ಸೇಕಡಾ 77 ಭಾಗದಷ್ಟು ದೈನಂದಿನ ಬಳಕೆ ವಸ್ತುಗಳನ್ನೂ ತಯಾರಿಸಲಾಗಿತ್ತು. 1966ಇವುಗಳ ತಯಾರಿಕೆಯು 46:44ಪ್ರಮಾಣದಲ್ಲಿದೆ

ವಿದ್ಯುತ್ತಿನ ಉತ್ಪಾದನೆ ಸಹಾ ಈಗ ಎರಡು ದಶಕಗಳ ಹಿಂದೆ ಇದ್ದುದಕ್ಕೆ 24ರಷ್ಟು ಹೆಚ್ಚಿದೆ ಅಲ್ಲಿನ ಜನರು ಸರಾಸರಿ 1421 ಕಿಲೋವಾಟ್ ವಿದ್ಯುಚ್ಛಕ್ತಿಯನ್ನು ಉಪಯೋಗಿಸುತ್ತಿದ್ದಾರೆ, ಬಾಲ್ಕನ್ ಪರ್ಯಾಯ ದ್ವೀಪದ ಉಳಿದ ಯಾವ ದೇಶದಲ್ಲೂ ಈ ಪ್ರಮಾಣದ ವಿದ್ಯುತ್ ಸೌಲಭ್ಯವಿಲ್ಲ 1966ರಲ್ಲಿ 11ದಶಲಕ್ಷ ಕಿಲೋವಾಟ್ ವಿದ್ಯುತ್ತನ್ನು ಉತ್ಪಾದಿಸುವ ಬಲ್ಗೇರಿಯಾ 1970ರ ವೇಳೆಗೆ 21 ದಶಲಕ್ಷ ಕಿಲೋವಾಟ್‌ಗಳಷ್ಟನ್ನು ಉತ್ಪಾದಿಸುವುದು ಆಗ ಸರಾಸರಿ 2480 ಕಿಲೋವಾಟ್ ವಿದ್ಯುತ್ತನ್ನು ಉಪಯೋಗಿಸ ಬಹುದು

ಈಗ ಬಲ್ಗೇರಿಯಾದಲ್ಲಿ 160ಯಂತ್ರ ತಯಾರಿಕಾ ಕೇಂದ್ರಗಳಿವೆ 1960ರಲ್ಲಿನ ಒಟ್ಟು ಕೈಗಾರಿಕಾ ಉತ್ಪಾದನೆಯಲ್ಲಿ ಇದು 125%ಇತ್ತು, ಈಗ ಇದು ಸೇಕಡಾ ಹದಿನೇಳರಷ್ಟಾಗಿದೆ ಈಗ ಇನ್ನೂ ಅನೇಕ ಬಗೆ ಹೊಸ ಯಂತ್ರಗಳನ್ನು ತಯಾರಿಸಲಾಗುತ್ತಿದೆ ದೇಶದ ಒಳಗಿನ ಅವಶ್ಯಕತೆಯನ್ನು ಪೂರೈಸಿಕೊಂಡು ಹೆಚ್ಚಿನದನ್ನು ವಿದೇಶಗಳಿಗೆ ರಫ್ತು ಮಾಡಲಾಗುತ್ತಿದೆ ಇವುಗಳ ರಫ್ತು 1966ರಲ್ಲಿ ಒಟ್ಟು ರಫ್ತಿನ ಸೇಕಡಾ 13.9ರಷ್ಟು ಇದ್ದುದ್ದು 1966ರಲ್ಲಿ ಸೇಕಡಾ26 ·8ರಷ್ಟಾಗಿದೆ. ಮುಂಬರುವ ವರ್ಷಗಳಲ್ಲಿ ಈ ಕ್ಷೇತ್ರಕ್ಕೆ ಇನ್ನೂ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಲಾಗುವುದು. 19,0ರ ಹೊತ್ತಿಗೆ ಈ ಉತ್ಪಾದನೆಯನ್ನು 1966ರಲ್ಲಿ ಇದ್ದುದರ ಎರಡೂವರೆಯಷ್ಟು ಹೆಚ್ಚಿಸಲಾಗುವುದು.

1966ರಲ್ಲಿ ಬಲ್ಗೇರಿಯಾ 25ಲಕ್ಷ ಟನ್ ಕಬ್ಬಿಣದ ಅದಿರನ್ನೂ ಹತ್ತು ಲಕ್ಷ ಟನ್ ಉಕ್ಕನ್ನೂ, 225,000 ಟನ್‌ಗಳಷ್ಟು ಉಳಿದ ಲೋಹಗಳನ್ನೂ ತಯಾರಿಸಿತು. ಕ್ರೆಮಿಕೋರ್ಟ್ಸಿ ಎಂಬಲ್ಲಿ ನಿರ್ಮಾಣದಲ್ಲಿರುವ ಕಾರ್ಖಾನೆಯು ಭಾಗಶಃ ಮುಗಿದು, ಅದರಷ್ಟರಲ್ಲೇ ಕಾರ್ಯಾರಂಭ ಮಾಡಲಾಗಿದೆ, ಅದು ವರ್ಷಕ್ಕೆ 30 ಲಕ್ಷ ಟನ್ ಲೋಹಗಳನ್ನು ಉತ್ಪಾದಿಸುವುದು.

ರಾಸಾಯನಿಕ ವಸ್ತುಗಳ ತಯಾರಿಕೆಯಲ್ಲಿಯೂ ಬಲ್ಗೇರಿಯಾ ತೀವ್ರ ವೇಗದಿಂದ ಮುನ್ನಡೆಯುತ್ತಿದೆ. 1966ರಲ್ಲಿ,ಈ ದೇಶವು 870000 ಟನ್ ಸಾರಜನಕ ಗೊಬ್ಬರವನ್ನೂ, 500000 ಟನ್ ಫಾಸ್ಫೇಟ್ ಗೊಬ್ಬರವನ್ನೂ 318000 ಟನ್ ಗಂಧಕಾಮ್ಲವನ್ನೂ, 234000 ಟನ್ ಸೋಡಾವನ್ನೂ ತಯಾರಿಸಿತು. 1970ರಲ್ಲಿ ಇವುಗಳೊಂದನ್ನೂ ಮೂರರಷ್ಟು ಹೆಚ್ಚಾಗಿ ತಯಾರಿಸಲಾಗುವುದು.

### ಬಲ್ಗೇರಿಯಾದ ಇತರ ಕೈಗಾರಿಕೆಗಳು

ಬಲ್ಗೇರಿಯಾ ಕೈಗಾರಿಕಾ ವರ್ಷದಲ್ಲಿ ಕಾಲಿಟ್ಟದ್ದೇ ತಡ, ಅಲ್ಲಿ ಒಂದೊಂದು ಊರಿನಲ್ಲಿಯು ಒಂದಿಲ್ಲೊಂದು ಕೈಗಾರಿಕೆಗಳು ಏಳುತ್ತಿವೆ ಬಟ್ಟೆಗಿರಣಿಗಳು, ಪಾದರಕ್ಷೆ ತಯಾರಿಕಾ ಕೇಂದ್ರಗಳು, ಹಣ್ಣುಗಳನ್ನು ಹದ ಮಾಡುವ ಕೇಂದ್ರಗಳು ಅಲ್ಲಿ ಬೇಕಾದಂತಿವೆ. ವಸ್ತುಗಳ ಗುಣದಲ್ಲಿಯೂ ವೈಶಿಷ್ಟ್ಯವೆದ್ದು ಕಾಣುತ್ತದೆ ಬಲ್ಗೇರಿಯಾದ ರಸಭರಿತವಾದ ಹಣ್ಣುಗಳು, ತರಕಾರಿಗಳು ಮತ್ತು ಮಾಂಸಗಳಿಂದ ತಯಾರಿಸಿದ ಆಹಾರಗಳಿಗೆ ಬಲ್ಗೇರಿಯಾದ ಹೊರಗೆ ಸಹಾ ಹೆಚ್ಚಿನ ಗಿರಾಕಿಯಿದೆ. ಪಶ್ಚಿಮ ಯುರೋಪಿನಲ್ಲಿ ಇವನ್ನು ಆಶಿಸುವವರು ಬೇಕಾದಂತಿದ್ದಾರೆ.

ವ್ಯವಸಾಯಕ್ಕೆ ಬಲ್ಗೇರಿಯಾ ಮುಖ್ಯ ಸ್ಥಾನವನ್ನು ನೀಡಿದೆ. ಸಹಕಾರೀ ಮತ್ತು ಸಹಕಾರೀ ಕ್ಷೇತ್ರಗಳ ವಶದಲ್ಲಿ 10000 ಎಕರೆಗಳ ವ್ಯವಸಾಯ ಯೋಗ್ಯವಾದ ಭೂಮಿಯಿದೆ. ಅಲ್ಲಿರುವ 920 ಸಹಕಾರ ಕ್ಷೇತ್ರಗಳು 66423 ಟ್ರ್ಯಾಕ್ಟರುಗಳನ್ನು ಹೊಂದಿದೆ. ಅಲ್ಲದ ವ್ಯವಸಾಯದಲ್ಲಿ ಸೇಕಡಾ 90ರಷ್ಟು ಕೆಲಸಗಳನ್ನು ಯಾಂತ್ರೀಕೃತವಾಗಿಯೇ ನಡೆಸುವುದಕ್ಕೆ ಬೇಕಾದ ಸಾಮಗ್ರಿಗಳೆಲ್ಲಾ ಈ ಸಹಕಾರೀ ಕ್ಷೇತ್ರಗಳ ಬಳಿ ಇದೆ.

ಇವೆಲ್ಲಾ ಕಾರಣಗಳಿಂದ ಪ್ರಜೆಗಳಲ್ಲಿ ಸಂತೃಪ್ತಿಯ ನಗೆ ಬರಿಸುವಷ್ಟು ಆರ್ಥಿಕ ಸುಧಾರಣೆಯನ್ನು ಬಲ್ಗೇರಿಯಾ ಸಾಧಿಸಿದೆ.

### ಭಾರತದಿಂದ ಬಲ್ಗೇರಿಯಾ ಏನು ಕೊಳ್ಳುತ್ತಿದೆ?

ಚಹಾ, ಕಾಫೀಬೀಜ,ಸೆಣಬು ಸಂಭಾರ ಪದಾರ್ಥಗಳು, ಮತ್ತು ಯಂತ್ರ ತಯಾರಿಕೆಯಲ್ಲಿ ಬೇಕಾಗುವ ಕೆಲಭಾಗಗಳು ಇವೇ ಮುಂತಾದವನ್ನು ಬಲ್ಗೇರಿಯಾ ಭಾರತದಿಂದ ಆಮದು ಮಾಡಿಕೊಳ್ಳುತ್ತದೆ.

ಎರಡೂ ದೇಶಗಳೂ ಮುಂದುವರೆಯುತ್ತಿರುವ ದೇಶಗಳಾದ್ದರಿಂದ ಯಂತ್ರಗಳನ್ನು ವಿನಿಮಯ ಮಾಡಿಕೊಳ್ಳಲು ಪೂರ್ಣ ಅವಕಾಶವಿದೆ. ಬಲ್ಗೇರಿಯಾದ ಅನೇಕ ಕಟ್ಟಡಗಳ ನಿರ್ಮಾಣದಲ್ಲಿ ಭಾರತದ ಟಾಟಾ ಕಂಪೆನಿಯು ತಯಾರಿಸಿದ ಡಂಪರುಗಳನ್ನು ಉಪಯೋಗಿಸಲಾಗುತ್ತಿದೆ. ಇಂತಹ ಐದುನೂರು ಡಂಪರುಗಳಿಗೆ ಆಗಲೇ ಬೇಡಿಕೆಯನ್ನು ಸಲ್ಲಿಸಲಾಗಿದೆ. ಅಲ್ಲದೆ, ಬೆಂಗಳೂರಿನ ಹಿಂದೂಸ್ಥಾನ್ ಮೆಷೀನ್ ಟೂಲ್ಸ್ ಸಂಸ್ಥೆಯಲ್ಲಿ ತಯಾರಾಗುವ ಕೆಲ ಬಗೆಯ ಲೇತ್‌ಗಳನ್ನು ಸಹಾ ಬಲ್ಗೇರಿಯಾ ಭಾರತದಿಂದ ಹನ್ನೆರಡು ದಶಲಕ್ಷ ಡಾಲರುಗಳ ವಸ್ತುಗಳನ್ನು ತರಿಸಿಕೊಂಡನು. ಎರಡೂ ದೇಶಗಳೂ ಇನ್ನೂ ಹೆಚ್ಚಾಗಿ ಆಮದು ಮಾಡಿಕೊಳ್ಳುವ ಸಾಧ್ಯತೆಯಿದೆ. ಇಲ್ಲಿ ವ್ಯಾಪಾರ ಮತ್ತು ಆರ್ಥಿಕದ ವ್ಯವಹಾರಗಳು ಆರಂಭದಶೆಯಲ್ಲೇ ಇವೆಯೆಂದು ಹೇಳಬಹುದು.

1966ರಲ್ಲಿ ಇದ್ದುದಕ್ಕೆ 1967ರಲ್ಲಿ ಎಷ್ಟೋ ಸುಧಾರಣೆಯಾಗಿದೆಯೆಂದೆನ್ನಬಹುದು. ದೆಹಲಿ ಬಲ್ಗೇರಿಯಾ ರಾಜಧಾನಿ ಸೋಫಿಯಾಗಳ ನಡುವೆ ಆಗಿರುವ ಒಪ್ಪಂದಕ್ಕನುಗುಣವಾಗಿ 295 ದಶಲಕ್ಷ ರೂಪಾಯಿಗಳ ವಸ್ತುಗಳನ್ನು ವಿನಿಮಯ ಮಾಡಿ ಕೊಳ್ಳಲಾಗುವುದು ಕಳೆದ ವರ್ಷವಿದ್ದುದಕ್ಕೆ ಇದು ಮೂರರಷ್ಟು ಹೆಚ್ಚಾಗಿದೆ.

ಮೇಲೆ ಮೇಲೆ ಒಪ್ಪಂದಗಳು ಸಿದ್ಧವಾಗುತ್ತಿರುವುದರಿಂದ ಎರಡು ದೇಶಗಳ ವ್ಯಾಪಾರ ಬಾಂಧವ್ಯ ಮೇಲೇರುತ್ತಲೇ ಹೋಗುತ್ತದೆ.

ಇದೇ ವರ್ಷ ಮೇ ತಿಂಗಳಿನಲ್ಲಿ ಭಾರತಕ್ಕೆ ಆಗಮಿಸಿದ್ದ ಬಲ್ಗೇರಿಯಾದ ಉಪಪ್ರಧಾನಿ ಟಾನೋ ಸೋಲೋನ್ ಮತ್ತು ಅವರ ತಂಡದವರು ಹಸ್ತಾಕ್ಷರ ಹಾಕಿದ ಒಪ್ಪಂದಗಳು ಪರಸ್ಪರ ಆರ್ಥಿಕ ಸಹಕಾರವನ್ನು ಇನ್ನೂ ವೃದ್ಧಿಗೊಳಿಸಿವೆ.

ಆಹಾರ ತಯಾರಿಕಾ ಕೇಂದ್ರಗಳು ಲೋಹಗಳನ್ನು ಉತ್ಪಾದಿಸುವ ಕೇಂದ್ರಗಳು ರಾಸಾಯನಿಕ ಮತ್ತು ಔಷಧ ತಯಾರಿಕಾ ಕೇಂದ್ರಗಳು ಮುಂತಾದವನ್ನು ಸ್ಥಾಪಿಸಲು, ವ್ಯಾವಸಾಯಿಕ ಯಂತ್ರಗಳನ್ನು ಕೊಳ್ಳಲೂ, ನೀರಾವರಿ ಯೋಜನೆಗೆ ಬೇಕಾದ ಬಂದರು ಯಂತ್ರಗಳನ್ನು ಕೊಳ್ಳಲೂ, ನೀರಾವರಿ ಯೋಜನೆಗೆ ಬೇಕಾದ ಯಂತ್ರಗಳನ್ನು ಕೊಳ್ಳಲೂ ಬಲ್ಗೇರಿಯಾ ಭಾರತಕ್ಕೆ ಸಾಲನೀಡಿದೆ. ಅಲ್ಲದೆ ಹಣ್ಣು ಮತ್ತು ತರಕಾರಿಗಳನ್ನು ಒದಗಿಸುವ ಹದಮಾಡುವ ಇಡೀ ಕಾರ್ಖಾನೆಯನ್ನು ನಿರ್ಮಿಸಿಕೊಡುವಂತೆ ಭಾರತ ಕೇಳಿಕೊಂಡಿದೆ. ಇದಕ್ಕೆ ವಿನಿಮಯವಾಗಿ ಬಲ್ಗೇರಿಯಾವು ಭಾರತದಿಂದ ಡಂಪರುಗಳು, ಟ್ರಕ್ಕುಗಳು, ನೆಲಕೊರೆಯುವ ಯಂತ್ರಗಳು,ಕಾಗದ ಉದ್ಯಮಕ್ಕೆ ಬೇಕಾಗುವ ಯಂತ್ರಗಳು, ಮತ್ತು ಇನ್ನೂ ಕೆಲವು ಬಲ್ಗೇರಿಯಾದಲ್ಲಿ ತಯಾರಾಗದ ವಸ್ತುಗಳನ್ನು ತರಿಸಿಕೊಳ್ಳಲಿದೆ.

ಬಲ್ಗೇರಿಯಾ ದೇಶವು ಏನೆಲ್ಲಾ ವಸ್ತುಗಳನ್ನು ನೀಡಬಹುದುಎಂಬುದನ್ನು ತೋರಿಸುವ ಸಲುವಾಗಿಯೇ ಇದೆ ನವೆಂಬರದಲ್ಲಿದೆಹಲಿಯಲ್ಲಿ ಬಲ್ಗೇರಿಯಾದ ಕೈಗಾರಿಕಾಪ್ರದರ್ಶನವನ್ನು ಏರ್ಪಡಿಸಲಾಗಿದೆ.

## ಪಾಳಯದಲ್ಲಿ

[ನಾಲ್ಕನೇ ಪುಟದಿಂದ]

ಕಾಲದ ಓರ್ವ ಆಂಗ್ಲ ಹುಡುಗಿಯು ಓರ್ವ ಕರಿ ಮನುಷ್ಯನೊಡನೆ ಸ್ನೇಹಪೂರ್ಣ ವ್ಯವಹಾರ ಮಾಡುತ್ತಿದ್ದಾಳೆ. ಇದು ಅವನಿಂದ ನೋಡಲಾಗುತ್ತಿರಲಿಲ್ಲ. ಸಾಧ್ಯವಾದ ಮಟ್ಟಿಗೂ ಅವರಿಬ್ಬರನ್ನೂ ಪರಸ್ಪರ ಬೇರೆಯಾಗಿಡಲು ಅವನು ಪ್ರಯತ್ನ ಪಡುತ್ತಿದ್ದ. ಇಬ್ಬರ ಕೆಲಸದ ಸಮಯವನ್ನು ಬದಲಾಯಿಸಿದ. ಇವಳು ಕೆಲಸದ ಮೇಲಿದ್ದಾಳೆಂದರೆ ಅವನಿಗೆ ಬಿಡುವಿರುತ್ತಿತ್ತು ಮತ್ತು ಅವನು ಕೆಲಸದ ಮೇಲಿದ್ದಾಗ ಇವಳಿಗೆ ಬಿಡುವಿರುತ್ತಿತ್ತು.

ಗುಂಪಿನ ಬಾಕಿ ಜನರ ಗಮನಕ್ಕೆ ಈ ವಿಷಯ ಬಂತು. ಹಿರಿಯ ಸರ್ಜನ್ ಬೇಕು ಬೇಕೆಂತಲೇ, ಇವರಿಬ್ಬರೂ ಪರಸ್ಪರ ಭೆಟ್ಟಿಸದಿರಲಿ ಎನ್ನುವಂತೆ ಯೋಜನೆಗಳನ್ನು ನಿರೂಪಿಸುತ್ತಿದ್ದಾನೆ ಎನ್ನುವುದನ್ನು ಯಾವಾಗ ಅವರು ಕಂಡುಕೊಂಡರೋ ಆಗ ಅವರು ಇವರಿಬ್ಬರ ಪಾರಸ್ಪರಿಕ ಭೇಟಿಗಳು ಸುಲಭವಾಗುವಂತೆ ಉಪಾಯಗಳನ್ನು ಮಾಡತೊಡಗಿದರು.

ವಿರೋಧದಿಂದ ಆಕರ್ಷಣೆ ಹೆಚ್ಚುತ್ತದೆ. ಹಿರಿಯ ಸರ್ಜನ್ ಈ ವಿರೋಧವನ್ನುಂಟು ಮಾಡದೆ ಹೋಗಿದ್ದ ಪಕ್ಷದಲ್ಲಿ ಅವರ ಸ್ನೇಹದ ತೀವ್ರತೆ ಹೆಚ್ಚುತ್ತಿರಲಿಲ್ಲ. ಇಬ್ಬರ ಪರಿಚಯವಾಗಿ ಬಿಡುತ್ತಿತ್ತು. ಇಬ್ಬರಲ್ಲೂ ಸ್ನೇಹವುಂಟಾಗಿಬಿಡುತ್ತಿತ್ತು ಅಷ್ಟೆ. ಹೆಚ್ಚೆಂದರೆ ಅವರಲ್ಲಿ ಪರಸ್ಪರ ಅತ್ಯಂತ ಹೆಚ್ಚಾದ ಮಿತ್ರಭಾವನೆಯು ಸ್ಥಾಪಿತವಾಗುತ್ತಿತ್ತು ಆದರೆ ಪ್ರೇಮದ ಪ್ರಾದುರ್ಭಾವ ಆಗಿಯೇ ಬಿಡುತ್ತಿತ್ತು ಎಂದು ಹೇಳುವುದಕ್ಕಾಗುತ್ತಿರಲಿಲ್ಲ

ಅವಳು ಬಹು ಸ್ವಾಭಿಮಾನಿಯಾಗಿದ್ದಳು ಇತ್ತ ಇವನೂ ಕೂಡ ಯಾವ ರೀತಿಯೇ ಆಗಲಿ ಅದಕ್ಕಿಂತ ಕಡಿಮೆ ಸ್ವಾಭಿಮಾನಿಯಾಗಿರಲಿಲ್ಲ. ಹೇಗೆ—ಹೇಗೆ ಅವರ ಗಮನಕ್ಕೆ, ಹಿರಿಯ ಸರ್ಜನ್ ಬೇಕು ಬೇಕಾಗಿಯೇ ತಮ್ಮನ್ನು ದೂರವಿಡಲು ಪ್ರಯತ್ನಿಸುತ್ತಿದ್ದಾನೆ. ಎಂಬ ವಿಷಯ ಬರಲಾರಂಭಿಸಿತೋ, ಹಾಗೆ—ಹಾಗೆ ಅವರಲ್ಲಿದ್ದ ಪಾರಸ್ಪರಿಕ ಆಕರ್ಷಣೆಯು ತೀವ್ರತರವಾಗಲಾರಂಭಿಸಿತು ಈಗ ಅವರ ಬುದ್ಧಿ, ಕಳ್ಳತನದಿಂದ ಭೆಟ್ಟಿಸಲು ಸಹಾಯಕವಾಗುವ ಉಪಾಯಗಳನ್ನರಸುವುದರಲ್ಲಿ ವಿನಿಯೋಗವಾಗಲಾರಂಭಿಸಿತು.

ಅವನು ಕೆಲಸದಮೇಲಿದ್ದಾಗ ಹಾಗೂ ತನ್ನ ಬಿಡುವು ವೇಳೆಯಲ್ಲ ಅವಳು ಅವನನ್ನು ಸಂಧಿಸಲು ಆಸ್ಪತ್ರೆಗೆ ಹೋದರೆ ಇದನ್ನೇ ಹೊಂಚು ಹಾಕಿಕೊಂಡು ಕುಳಿತಿರುತ್ತಿದ್ದ ಹಿರಿಯ ಸರ್ಜನ್, ಅವಳನ್ನು ಅಲ್ಲಿಂದ ತತ್‌ಕ್ಷಣ ಓಡಿಸಿಬಿಡುತ್ತಿದ್ದ. ಅವಳು ಕೆಲಸದ ಮೇಲಿದ್ದಾಗ ಹಾಗೂ ತನ್ನ ವಿರಾಮದ ಕಾಲದಲ್ಲಿ ಇವನು ಅವಳನ್ನು ಭೆಟ್ಟಿಸಲು ಆಸ್ಪತ್ರೆಗೆ ಹೋದಪಕ್ಷಕ್ಕೆ ಈ ವಿಷಯದಲ್ಲಿ ಆ ಹಿರಿಯ ಸರ್ಜನ್‌ಗೆ ಅಂಥ ವಿಶೇಷ ಸಂದೇಹವೇನೂ ಉಂಟಾಗುತ್ತಿರಲಿಲ್ಲ. ಆದರೆ ಒಬ್ಬ ಕರಿ ಮನುಷ್ಯನತ್ತ ಆಕರ್ಷಿತಗೊಂಡು ಓರ್ವ ಬಿಳಿ ಹುಡುಗಿ ಬಂಧನ ಮುರಿದು ಒಳಗೆ ನುಗ್ಗುವ ಪ್ರಯತ್ನ ಮಾಡುವುದು ಆ ಹಿರಿಯ ಸರ್ಜನನಿಗೆ ಬಹಳ ಕೆಟ್ಟದಾಗಿ ಕಂಡು ಬರುತ್ತಿತ್ತು.

ಒಂದು ದಿನ ಆ ಹಿರಿಯ ಸರ್ಜನ್ ಏಕಾಂತದಲ್ಲಿ ಆ ನರ್ಸನ್ನು ಕರೆದು ತೀವ್ರ ಎಚ್ಚರಿಕೆ ಕೊಟ್ಟನು. ಆದರೆ ಅವಳು ಸರ್ಜನ್ನಿನ ಬೆದರಿಕೆಯನ್ನು ತಮಾಷೆಯೆಂದು ತಿಳಿದು ಹಾರಿಸಿಬಿಟ್ಟಳು. ಆ ಹಿರಿಯ ಸರ್ಜನ್ ಕೂಡ ಯುವಕನಾಗಿದ್ದ. ಶರಚ್ಚಂದ್ರನಂತೆಯೇ ತರುಣನಾಗಿದ್ದ. ಆದ್ದರಿಂದ ನರ್ಸ್ ಹೆಂಗಸು ಅವನ ಮಾತುಗಳನ್ನು ವಿಪರ್ಯಾಸಗೊಳಿಸಿ ಅವನು ಶರಚ್ಚಂದ್ರನನ್ನು ಕಂಡರೆ ಉರಿಯುತ್ತಾನೆ ಎಂಬುದಾಗಿ ಆರೋಪ ಹೊರಿಸಿದಳು.

ಗುಂಪಿನ ಇತರರು ಈ ಕಾಂಡದಲ್ಲಿ ಆಸಕ್ತಿ ವಹಿಸಲಾರಂಭಿಸಿದರು, ಈಸಂದರ್ಭದಲ್ಲಿ ಅವರು ಏನಾದರೊಂದು ತಕರಾರು ತಂದೊಡ್ಡಲೇ ಬೇಕಾಗಿತ್ತು ಅವರ ಮೇಲೆ ಹಿರಿಯ ಸರ್ಜನನ ಪ್ರಭಾವ, ಒಂದು ರೀತಿಯಿಂದ, ಹೆಚ್ಚಾಗಿಯೇ ಇತ್ತೆಂದು ಹೇಳಬೇಕು. ತಾನು ಒಬ್ಬ ದೊಡ್ಡ ಆಫೀಸರ್, ಒಬ್ಬ ಕಟ್ಟುನಿಟ್ಟಾದ ಅಧಿಕಾರಿ ಮತ್ತು ಇಡೀ ಗುಂಪಿನ ನೈತಿಕ ಆಚರಣೆಯ ಜವಾಬ್ದಾರಿ ತನ್ನ ತಲೆಯ ಮೇಲೆ ಇದೆಯೆಂದು ಭಾವಿಸಿಯೇ ಆ ಸರ್ಜನ್ ಅವರೆಲ್ಲರೊಡನೆ ವ್ಯವಹರಿಸುತ್ತಿದ್ದ. ಈ ಕಾರಣದಿಂದಲೇ ಅವನು ಇತರ ಡಾಕ್ಟರುಗಳ ದೃಷ್ಟಿಯಿಂದ ಕೆಟ್ಟವನಾಗಿ ಬಿಟ್ಟಿದ್ದ. ಮಿಲಿಟರಿ ಅನುಶಾಸನದ ಪ್ರಯುಕ್ತ ಅವನ ಆಜ್ಞೆಯುಲ್ಲಂಘಿಸುವುದು ಅವರಿಗೆ ಸಾಧ್ಯವಿರಲಿಲ್ಲ. ಆದ್ದರಿಂದ ಅವರೆಲ್ಲ ಇವನ ಯಾವುದಾದರೊಂದು ವೈಯುಕ್ತಿಕ ವ್ಯವಹಾರದ, ಅವನನ್ನು ಹಿಡಿಯೋಣ ಹಾಗೂ ಆ ವಿಷಯವನ್ನು ಹಿಡಿದುಕೊಂಡು ಅವನನ್ನು ಅಪಮಾನಗೊಳಿಸೋಣವೆಂದು ಹೊಂಚು ಹಾಕಿಕೊಂಡು ಕಾಯುತ್ತಾ ಕುಳಿತಿದ್ದರು.

ಅವರೆಲ್ಲ, ಹಿರಿಯ ಸರ್ಜನ್, ಡಾಕ್ಟರ್, ಶರಚ್ಚಂದ್ರನನ್ನು ಕಂಡರೆ ಉರಿಯುತ್ತಾನೆಂದು ಹೇಳಿ ಬುರುಡೆ ಬಿಟ್ಟರು. ಈ ವಿಷಯ ಎಲ್ಲರ ಚರ್ಚೆಯ ಮಾತಾಗಿ ಬಿಟ್ಟಿತು.

ವಸ್ತುಸ್ಥಿತಿ ಹೀಗಿರಲಿಲ್ಲವೆಂದು ಹೇಳುವುದಕ್ಕೂ ಆಗುತ್ತಿರಲಿಲ್ಲ. ಹಿರಿಯ ಸರ್ಜನ್ನಿನ ಹೃದಯದ ಯಾವುದೋ ಸ್ಥಾನದಲ್ಲಿ ಆ ನರ್ಸಿನ ಬಗ್ಗೆ ಪ್ರೇಮದ ಆರ್ದ್ರತೆಯಿತ್ತು. ಇದು ಅವನಲ್ಲಿ ತಾನು ಆಂಗ್ಲೇಯನೆಂಬ ಭಾವನೆ ಎಷ್ಟರ ಮಟ್ಟಿಗೆ ಜಾಗ್ರತವಾಗಿತ್ತೋ ಅಷ್ಟೇ ಜಾಗ್ರತವಾಗಿತ್ತು.

ಒಂದು ದಿನ ಅವನು ಶರಚ್ಚಂದ್ರನನ್ನು ತನ್ನ ಡೇರೆಗೆ ಕರೆಸಿಕೊಂಡ. ಮನಸ್ಸನ್ನು ಸಂಪೂರ್ಣವಾಗಿ ಸಿದ್ಧಗೊಳಿಸಿಕೊಂಡೇ ಶರಚ್ಚಂದ್ರ ಅವನಲ್ಲಿಗೆ ಹೋಗಿದ್ದ. ಆಗ ಹಿನ್ನಲೆಯೇನೂ ಇಲ್ಲದೆ ಹಿರಿಯ ಸರ್ಜನ್ ಸ್ಪಷ್ಟ ಶಬ್ದಗಳಲ್ಲಿ ಅವನನ್ನು ಪ್ರಶ್ನಿಸಿದ.

"ಏನ್ರೀ, ಆ ಹುಡುಗಿಯೊಡನೆ ನಿಮ್ಮ ಯಾವ ಈ ಆಟ ಸಾಗುತ್ತಿದೆಯಲ್ಲಾ' ಇದರ ಅರ್ಥ ಏನು?"

"ಆಟ ನಡೀತಿದೆ ಅಂತ ಯಾಕೆ ನೀವು ಹೇಳ್ತೀರಾ?" ಶರಚ್ಚಂದ್ರನೆಂದ. "ನಿಮ್ಮಗಳಗಿಂತ ನಾವು ಹಿಂದೂಸ್ಥಾನಿಗಳಿಗೆ ಸ್ತ್ರೀಯರ ಗೌರವದ ಬೆಲೆ ಹೆಚ್ಚಾಗಿ ತಿಳಿದಿದೆ. ನಮ್ಮಿಬ್ಬರ ಪರಿಚಯವಾಗಿ ಬಿಟ್ಟಿದೆ. ಒಂದೇ ಕಡೆ ಕೆಲಸ ಮಾಡುತ್ತ ಇತ್ತೀಚೆ ಒಬ್ಬರನ್ನೊಬ್ಬರು ಅರಿತುಕೊಳ್ಳಲಾರಂಭಿಸಿದ್ದೇವೆ ಸ್ನೇಹ ಬಂಧನವು ನಮ್ಮನ್ನು ಪರಸ್ಪರ ಕಟ್ಟಿಹಾಕಿ ಬಿಟ್ಟ ಪಕ್ಷಕ್ಕೆ ಇದರಿಂದ ಕೆಟ್ಟೇನು ಹೋಯ್ತು?

–"ಅಂದ್ರೆ ನೀವು ಹೇಳೋದೇನೆಂದ್ರೆ ನಿಮ್ಮಿಬ್ಬರಪರಿಚಯ ಕೇವಲ ಸ್ನೇಹದವರೆಗೆ ಮಾತ್ರ ಸೀಮಿತ ಅಂತಲೋ? ಇದಕ್ಕಿಂತ ಮುಂದೆ ನೀವು ಸುತರಾಂ ಹೆಚ್ಚಿಲ್ಲ ಅಂತಲೇ?

"ಇದಕ್ಕಿಂತ ಮುಂದೆ ಹೊರಟು ಹೋಗಿದ್ದೇವೆ ಅಂದುಕೊಂಡ್ರೂ ಕೂಡ ನಾವಿಟ್ಟ ಹೆಜ್ಜೆ ಏಕಪಕ್ಷೀಯವಾಗಲಿಲ್ಲ. ಇದು ಖಂಡಿತವಾಗಿಯೂ ನಿಶ್ಚಿತ- ಅವಳನ್ನು ಸಂಧಿಸಲು ನಾನೆಷ್ಟು ಉತ್ಸುಕನಾಗಿರುತ್ತೇನೋ, ತನ್ನ ಭೇಟಿ ಮಾಡಲು ಅವಳು ಅದಕ್ಕಿಂತ ಹೆಚ್ಚು ಉತ್ಸುಕಳಾಗಿಬಿಡುತ್ತಾಳೆ. ಇದನ್ನು ನೀವು ನೋಡಿಯೇ ಇದ್ದೀರಿ. ನಾನೇನು ಅಕುಲೀನನಲ್ಲ. ಅವಳೆಷ್ಟು ಕುಲೀನಳೋ ನಾನೂ ಕೂಡ ಅಷ್ಟೇ ಆಗಿದ್ದೇನೆ. ಅಂತಹ ಒಂದು ಸಂಯೋಗವೇನಾದರೂ ಬಂದೇಬಿಟ್ಟ ಪಕ್ಷಕ್ಕೆ ಅವಳ ಮಟ್ಟಕ್ಕೆ ತಕ್ಕ ಹಾಗೆ ಅವಳನ್ನಿಟ್ಟುಕೊಳ್ಳಲು ಸರ್ವ ವಿಧದಿಂದಲೂ ಸಮರ್ಥನಾಗಿದ್ದೇನೆ.

"ಆದರೆ ನೀವು ಹಿಂದೂಸ್ಥಾನಿಗಳು ತಾನೆ-ಬಹುಶಃ ಇದನ್ನ ನೀವು ಮರೆತು ಹೋದ್ರಿ ಅಂತ ಕಾಣುತ್ತೆ?"

"ಈ ರಣರಂಗಕ್ಕೆ ಬಂದ ತರುವಾಯದಿಂದ ಯಾವುದಾದರೂ ಒಂದು ಮಾತು ಸದಾ ನನ್ನ ಹೃದಯದಲ್ಲಿ ಜಾಗ್ರತವಾಗಿರುತ್ತದೆಂದರೆ ಅದು—ನಾನು ಹಿಂದೂಸ್ಥಾನಿ ಅನ್ನುವುದೇ. ನಾನೂ ಹಿಂದೂಸ್ಥಾನಿಯಾದ್ದರಿಂದಲೇ ಚೆನ್ನಾಗಿ ನಡೆಯುತ್ತಿದ್ದ ಪ್ರಾಕ್ಟೀಸ್ ಬಿಟ್ಟು, ಅದನ್ನು ಒದ್ದು, ನನ್ನ ಇಚ್ಛೆಯಿಂದ ಹೊಟ್ಟೆ ಹೊರೆಯೋಕೆ ಆ ಟವಷ್ಟು ಸಂಬಳಕೊಪ್ಪಿಕೊಂಡು, ಕಷ್ಟಪಟ್ಟು ದುಡಿಯೋದಕೋಸ್ಕರ ಈ ರಣಭೂಮಿಗೆ ಬಂದಿದ್ದೇನೆ. ನೀವು ಅಂದಿದ್ದೀರಿ ಜಬರ್ದಸ್ತಿನಿಂದ ನಾನು ಬಂದಿದ್ದೇನೆ ನನ್ನ ಇಚ್ಛೆಯಿಂದ ನನ್ನ ಖುಶಿಯಿಂದ ಏನಾದರೊಂದು ಹೊಸ ಶಿಕ್ಷಣ ರಣಭೂಮಿಯಲ್ಲಿ ನನಗೆ ಲಭ್ಯವಾಗಿ ಬಿಡುತ್ತೆ ಅನ್ನುವ ಒಂದು ಶ್ರದ್ಧೆಯಿಂದ

"ಹಾಗಾದ್ರೆ ನೀವು ಬಹುಶಃ ಇದೇ ಹೊಸ ಶಿಕ್ಷಣವನ್ನೊ ಕಲಿತಿರೋದು ಇಲ್ಲಿ" ಹಿರಿಯ ಸರ್ಜನ್ ನೋವಾಗುವಂತೆ ನುಡಿದ.

"ಇದನ್ನು ಕಲಿಯೋಕೆ ನಾವು ಸಮರಭೂಮಿಗೆ ಬರಬೇಕಾದ ಅಗತ್ಯ ಇರಲಿಲ್ಲ. ನಮ್ಮಲ್ಲಿಯ ಎಷ್ಟೋ ಮಂದಿ ವಿದ್ಯಾರ್ಥಿಗಳು ಇಂಗ್ಲೆಂಡಿಗೆ ತೆರಳಿ ಆಂಗ್ಲ ಹುಡುಗಿಯರನ್ನು ಮದುವೆ ಮಾಡಿಕೊಂಡು ಹಿಂದೂಸ್ಥಾನಕ್ಕೆ ಹಿಂತಿರುಗಿ ಬಂದಿದ್ದಾರೆ."

"ಆದರೆ ಅವರು ಇಂತಹ ಹುಡುಗಿಯರಾಗಿರಲಿಲ್ಲ. ಇವಳು ಯಾರ ಹುಡುಗಿ ಅನ್ನೋದು ನಿಮಗೇನಾದ್ರೂ ಗೊತ್ತೊ? ಇವಳ ತಂದೆಯ ಅಂತಸ್ತಿನಬಗ್ಗೆ ಏನಾದ್ರೂ ಗೊತ್ತಿದೆಯಾ ನಿಮಗೆ? ಎಷ್ಟು ಶತಮಾನಗಳ ನೀಲಿರಕ್ತ ಇವಳ ನಾಡಿ ನಾಡಿಗಳಲ್ಲಿ ಹರಿಯುತ್ತಿದೆ ಗೊತ್ತಾ ನಿಮಗೆ?"

ಶರಚ್ಚಂದ್ರ ಸುಮ್ಮನೆ ನಕ್ಕುಬಿಟ್ಟ. ಅವನ ಆ ಹಾಸ್ಯದಲ್ಲಿ ಅಸೌಜನ್ಯದ ಒಂದು ಲಕ್ಷಣ ಕಂಡುಬರುತ್ತಿತ್ತು ಈ ಹಾಸ್ಯದಿಂದ ಹಿರಿಯ ಸರ್ಜನ್ ರೇಗಿಹೋದ ಆದರೆ ಕೋಪವನ್ನು ಒಳಗೇ ನುಂಗಿಕೊಂಡು ಅವನೆಂದ —"ನಾನು ನಿಮ್ಮ ಹಿರಿಯ ಅಧಿಕಾರಿ ಮಿಲಿಟರಿ ಅಧಿಕಾರಿಯಾಗಿದ್ದೇನೆ. ಇಲ್ಲಿನ ಕಾನೂನುಗಳು ಎಷ್ಟು ಕಠಿಣವಾಗಿವೆ ಅನ್ನೋದನ್ನು ನೀವುತಿಳಿದುಕೊಂಡೇ ಇದ್ದೀರಿ ಆ ಕಾನೂನುಗಳ ಆಸರೆ ಪಡೆದು ನಿಮ್ಮಿಬ್ಬರನ್ನೂ ಸದಾ ಕಾಲಕ್ಕೂ ಪರಸ್ಪರ ಬೇರ್ಪಡಿಸಿಬಿಡುವುದು ನನಗೆ ಚುಟಕಿ ಹಾರಿಸುವಷ್ಟು ಸುಲಭ ಇದರ ಕಲ್ಪನೆಯಂತೂ ನಿಮಗೆ ಇರಲೇ ಬೇಕಲ್ಲವೇ

ಇದರಿಂದ ಶರಚ್ಚಂದ್ರನ ಮೇಲೆ ಪರಿಣಾಮವೇನಾಗಲಿಲ್ಲ ಅಷ್ಟೇ ನಿರ್ಯೋಚನೆಯಿಂದ ಅವನೆಂದ—"ಯೋಚನೆ ಮಾಡದೆ ನಾನು ಎಂದೂ ಯಾವ ಕೆಲಸವನ್ನೂ ಮಾಡೋದಿಲ್ಲ ಯುದ್ಧ ಒಂದಲ್ಲ ಒಂದು ದಿನ ಮುಕ್ತಾಯವಂತೂ ಆಗಲೇಬೇಕಷ್ಟೆ ಯಾವಾಗಲಾದ್ರೂ ಒಮ್ಮೆ ನಾವು ನಮ್ಮ ನಮ್ಮ ಮನೆಗಳಿಗೆ ಹಿಂತಿರುಗಿ ಹೋಗಲೇ ಬೇಕಷ್ಟೆ-ಅಂದ್ರೆ, ಬದುಕಿದ್ದ ಪಕ್ಷಕ್ಕೆ ಆದರೆ ಎಲ್ಲಿಯತನಕ ಈ ಜೀವನದಲ್ಲಿ ಪ್ರಾಣವಿದೆಯೋ ಅಲ್ಲಿಯತನಕ ನನ್ನನ್ನ ಅವಳಿಂದ ದೂರಮಾಡುವುದು ಸಾಧ್ಯವಾಗದು"

ಇನ್ನೂ ಕೆಲವು ದಿನಗಳುರುಳಿದವು ಈ ನಡುವೆ ಹಿರಿಯ ಸರ್ಜನ್ ಅವರಿಬ್ಬರ ಭೇಟಿಗೆ ತಡೆಯೇನೂ ಉಂಟುಮಾಡಲಿಲ್ಲ ಬದಲು ಅವರ ಪಾರಸ್ಪರಿಕ ಭೇಟಿಗೆ ಇಬ್ಬರಿಗೂ ಸೌಲಭ್ಯವನ್ನೊದಗಿಸಿಕೊಟ್ಟ, ಅವರು ಆಗಾಗ ಸಂಧಿಸಲಾರಂಭಿಸಿದರು. ಘನೀಭೂತವಾಗುವ ಪ್ರೇಮದ ಬೀಜವು ಕ್ರಮ-ಕ್ರಮವಾಗಿ ಒಡೆದು ಹೊರಗೆ ಬರಲಾರಂಭಿಸಿತು. ಅದರ ಅಂಕುರಗಳು ಬೆಳೆಯಲಾರಂಭಿಸಿದವು ಹೀಗಿರಲು ಒಂದು ದಿನ ಆ ನರ್ಸಿನ ತಂದೆ ಪಾಳಯಕ್ಕೆ ಬಂದು ಸೇರಿದ ಹಿರಿಯ ಸರ್ಜನ್ ಶರಚ್ಚಂದ್ರನಿಗೆ ಅವನ ಪರಿಚಯ ಮಾಡಿಕೊಟ್ಟ. ವೃದ್ಧನ ಮಾತುಗಳಿಂದ ಹಿರಿಯ ಸರ್ಜನನು ತನ್ನ ವಿರುದ್ಧ ಚಾಡಿ ಮಾತುಗಳಿಂದ ಇವನ ಕಿವಿ ತುಂಬಿ ಬಿಟ್ಟಿದ್ದಾನೆ ಅನ್ನುವುದನ್ನು ಇವನು ಅರಿತುಕೊಂಡ ಬಿಟ್ಟ ಆ ವೃದ್ಧ ಶರಚ್ಚಂದ್ರನಿಗೆ ಸ್ಪಷ್ಟ ಶಬ್ದಗಳಲ್ಲಿ ಹೇಳಿಬಿಟ್ಟ ನಾನೊಬ್ಬ ಮನೆತನಸ್ಥ ನಿಮ್ಮ ದೇಶದ ಜನ ಹೇಗೆ ಪರಂಪರಾಗತವಾದಿಗಳಾಗಿರುತ್ತಾರೋ ಅಂತಹವರಂತೆಯೇ ನಾನೂ ಕೂಡ ಘೋರ ಪರಂಪರಾವಾದಿ ನೀವು ಎಷ್ಟು ಕಠೋರತೆಯಿಂದ ಜಾತಿವಾದವನ್ನು ಪಾಲಿಸುತ್ತೀರೋ ಅಷ್ಟೇ ಕಠೋರತೆಯಿಂದ ನಾವೂ ಕೂಡ ಶತಮಾನಗಳಿಂದ ಪಾಲಿಸಿಕೊಂಡುಬಂದಿವು ಈವತ್ತು ಅದನ್ನ ಪಾಲಿಸುತ್ತಿದ್ದೇವೆ ನಮ್ಮ ರಕ್ತದಲ್ಲಿ ಯಾವುದೇ ರೀತಿಯ ಮಿಶ್ರಣವಾಗದಿರಲಿ ಎಂಬ ದೃಷ್ಟಿಯಿಂದ ನಮ್ಮ ವಂಶದ ಅನೇಕ ಹುಡುಗಿಯರು ಆಜನ್ಮ ಅವಿವಾಹಿತೆಯರಾಗಿರುತ್ತಾರೆ. ಹುಡುಗರೂ ಸಹ ಅವಿವಾಹಿತರಿರುತ್ತಾರೆ. ಇಂತಹ ನನ್ನ ವಂಶದ ಈ ಹುಡುಗಿಯೊಡನೆ ವಿವಾಹವಾಗುವ ಆಶೆಯನ್ನು ನೀವು ಹೃದಯದಲ್ಲಿ ಇಟ್ಟುಕೊಂಡಿರುವಿರಿ. ಇದು ನಿಮ್ಮನ್ನ

(ಹತ್ತನೇ ಪುಟನೋಡಿ)

(ಒಂದನೇ ಪುಟದಿಂದ)

ದಲು ಆರಿಸಿಕೊಳ್ಳಬೇಕು. ಮುಖ್ಯವಾಗಿ ಇಂಥ ಜನರಲ್ಲಿ ಆ ಕುರಿತು ವಿಶೇಷ ಆಸಕ್ತಿ ಮತ್ತು ಶ್ರದ್ಧೆ ಇರಬೇಕು. ಅವರ ಚರಿತ್ರೆಯೂ ಪರಿಶುದ್ಧವಾಗಿರಬೇಕು ಅಂಥ ಜನರ ಮೂಲಕ ಈ ಸಂದೇಶವನ್ನು ಜನತೆಗೆ ಮುಟ್ಟಿಸುವಂತಾಗಬೇಕು. ಹೊರತು ಬಿಟ್ರೆ ಸಂದಾಯ ಮಾಡುವವರಿಂದ ಅದು ಸಾಧ್ಯವಿಲ್ಲ.

—ಶ್ರೀನಾಥ

---

[ಆರನೇ ಪುಟದಿಂದ]

ಕಾಲಿಡಬಾರದು....ಎಂದು ತಾಕೀತು ಮಾಡಿಬಿಟ್ಟರೆ ಇಲ್ಲವೆ ಡಿಫೆನ್ಸ್ ಇಂಡಿಯಾ ರೂಲ್ ಜ್ಯಾರಿ ಮಾಡಿಬಿಟ್ಟರೆ ಕುಟುಂಬ ಯೋಜನೆ ಸೆಂಟ್ ಪರ್ಸೆಂಟು ಸಕ್ಸಸ್ ಆಗಲಿಕ್ಕಿಲ್ಲವೇ?"

"ಮಾಡಿ ಬಿಡಬಹುದು. ಆದರೆ ನೀವೇನು ಮಾಡುತ್ತೀರಿ?"

"ಕಾಯಿದೆಗೆ ಶರಣು....

"ಓಹೋಹೋ ಕಾಯಿದೆಗೆ ಶರಣಂತೆ! ಮಾಡಿನ ಹಂಚು ಜಾರಿಸಿ ರಾತ್ರಿಗೆ ಒಳ ನುಗ್ಗುತ್ತೀರೋ ಏನೋ!"

"ನನ್ನ ಕತೆ ಬಿಡು; ಮಕ್ಕಳು ಪ್ರಾಂತದ ಮಹಿಳೆಯರು ಮೂರೇ ದಿನಗಳಲ್ಲಿ ರೆಕ್ಕೆ ಕಟ್ಟಿಕೊಂಡು ಹಕ್ಕಿನಂತೆ ಓಡಿಬಂದಾರು"

"ಸಾಕು ಸಾಕು ಹೆಂಗಸರು ಸಂಯಮಿಗಳು....ಗಂಡಸರ ಹಾಗಲ್ಲ....ಬಾರೀ ಉದ್ದಗಲಕ್ಕೆ ಮಾತನಾಡುತ್ತಾರೆ ಮತ್ತೆ.... ರಾತ್ರಿಯಾಯಿತು ದೀಪವಾರಿಸಿ...."

"ಶ್ರೀ ಮದ್ರಮಾರಮಣ ಗೋವಿಂದಾ ಗೋವಿಂದಾ!"

—ರೋಹಿಣೀರಸಿಕ

---

ಆರು ಏಳು ಪುಟದ ಮಧ್ಯದಿಂದ

ವಿಜ್ಞಾನಕ್ಕೆ ಏನು ಹೇಳಲಿದೆ" ಎಂದು ಕೇಳಿದಾಗ ಮಾರ್ಕಲ್‌ರು ತನ್ನ ಕಂಠನಾಳವನ್ನು ಸರಿಪಡಿಸುತ್ತ ಭಾಷಣಕ್ಕೆ ಎದ್ದು ನಿಂತರು.

"ಸರ್ ಥಿಯೋಫಿಲಸ್, ಸರ್ ಬುಲ್ಬಸ್ ಮತ್ತು ಸರ್ ಪಬ್ಲಿಯಸ್" ಎಂದು ಆರಂಭ

"ಕಳೆದ ವಾರವೆಲ್ಲ ನಾನು ಯೋಚನಾಮಗ್ನನಾಗಿದ್ದೆ. ಅದೀಗ ನನಗೊಂದು ಉತ್ತಮ ವಿಚಾರ ಹೊಳೆದಿರುತ್ತದೆ. ಕಳೆದ ಮೀಟಿಂಗಿನಲ್ಲಿ ನಾವು ತರ್ಕಿಸಿದ ಸಂಗತಿಗಳನ್ನೇ ಅಳವಡಿಸಿ ಹೋದಾಗ ನನಗೆ ಅನೇಕ ಯೋಚನೆಗಳು ಮೂಡಿದುವು ಅದೆನ್ನೆಲ್ಲ ನಾನೀಗ ತಿರಸ್ಕರಿಸಿರುವೆನು.

ಅಣು ಬಾಂಬು ಮತ್ತು ಜಲಜನಕ ಬಾಂಬುಗಳ ಶಕ್ತಿಯ ವಿಧ್ವಂಸಕ ಮತ್ತು ಘೋರ ವೃತ್ತಾಂತ ಕತೆಗಳನ್ನು ಸಾರ್ವಜನಿಕರೆಲ್ಲ ಕೇಳಿಕೇಳಿ ಸೋತು ಹೋಗಿರುವರು. ಆ ವಿಷಯವೆಲ್ಲ ಈಗ ಹಳೆಯದಾಗಿದೆ ಹಳಸು ಹೋಗಿದೆ. ಅದಲ್ಲದೆ ಈ ವಿಷಯದಲ್ಲಿ ಯಾವ ಸರಕಾರ ಜಾಗರೂಕವಾಗಿದೆಯೆಂದು ನಾವು ಹೇಳಬೇಕಾಗಿದೆ ಒಂದು ವೇಳೆ ಅಪ್ಪಿ ತಪ್ಪಿ ಹೇಳಿದರೆ ಯಾವ ಸರಕಾರವಾದರೂ ನಮ್ಮ ಘೋಷಣೆಗಳನ್ನು ವಿರೋಧಿಸಲು ಸಾಧ್ಯವಿದ,

ಅಣುಜೀವಿಗಳಿಂದ ಏನು ಮಾಡಲು ಸಾಧ್ಯವಿದೆಯೆಂದು ನಾನು ಬೇರೆ ಬೇರೆ ತೆರನಾಗಿ ಆಲೋಚಿಸಿದೆ ಎಲ್ಲಾ ರಾಜ್ಯಗಳ ಮುಖ್ಯಮಂತ್ರಿಗಳಿಗೆ "ನಾಯಿ ಹುಚ್ಚು" ಹಿಡಿಸಲು ಸಾಧ್ಯವಿದೆ, ಆದರೆ ಇದರಿಂದ ನಮಗೇನು ಲಾಭವೆಂಬುದು ತಿಳಿಯದಾಗಿದೆ ಅದಲ್ಲದೆ ಇದು ತೊಂದರೆಗಳಿಂದ ಕೂಡಿದ ಕೆಲಸ ಯಾಕೆಂದರೆ ಅವರಿಗೆಲ್ಲ "ನಾಯಿ ಹುಚ್ಚು" ಹಿಡಿಸಿದಲ್ಲಿ ಯಾರಾದರೊಬ್ಬ ಅವನ ರೋಗ ನಿಷ್ಕರ್ಷೆ ಮಾಡುವ ಮೊದಲೇ ನಮ್ಮನ್ನೆಲ್ಲ ಕಚ್ಚಿ ಬಿಟ್ಟಾನು!

ಆನಂತರ ಒಂದು ಉಪಗ್ರಹವನ್ನು ಭೂಮಿಯ ಸುತ್ತು ಕಳುಹಿಸುವ ವಿಚಾರ ಬಂತು. ಮೂರು ದಿನಗಳಿಗೊಮ್ಮೆ ಅದು ಭೂಮಿಯ ಸುತ್ತು ತಿರುಗುವುದು ಪ್ರತಿ ಬಾರಿ ಅದು ಮಾಸ್ಕೋದಲ್ಲಿನ ಕ್ರೆಮ್ಲಿನ್ ಪ್ರದೇಶ ದಾಟಿ ಮುಂದುವರಿಯುವಾಗ ಗುಂಡು ಹೊಡೆಯುವ-ಹಾರಿಸುವ ಯೋಜನೆ ಸಾಧ್ಯವಿದೆ ಆದರೆ ಇಂತಹ ಯೋಜನೆ ನಮಗ ಉಚಿತವಲ್ಲ. ಸರಕಾರಕ್ಕೆ ಹೇಳಿದುದು, ಅಂತಹ ಸಮರ ಸಂಧಾನಗಳಿಂದ ನಾವು ಬಹುದೂರವಿರಬೇಕು, ಪೂರ್ವ ಮತ್ತು ಪಾಶ್ಚಿಮಾತ್ಯ ರಾಜನೀತಿಗಳ ಅಥವಾ ಪ್ರದೇಶಗಳ ಕಚ್ಚಾಟದಲ್ಲಿ ಭಾಗವಹಿಸುವುದು ನಮಗೆ ಹೇಳದ ಕರ್ತವ್ಯವಲ್ಲ, ಈ ವಲಯ ವರ್ತುಲದೊಳಗೆ ಏನೇ ಆದರೂ ನಮ್ಮ ವ್ಯವಹಾರ ಪೋಟಾಪೋಟಿಯಿಲ್ಲದೆ ಸಾಗದೇಕು, ಅದ್ದರಿಂದ ತಟಸ್ಥ ನೀತಿಯಿಲ್ಲದ ಎಲ್ಲಾ ಯೋಜನೆ ಆಚಾರಗಳನ್ನು ನಾವು ತಿರಸ್ಕರಿಸುವೆನು,

ನಿಮಗೆ ಸೂಚಿಸಲೆಂದು ನನ್ನೊಡನೆ ಒಂದು ಯೋಜನೆಯಿದೆ, ಇದನ್ನು ತಿರಸ್ಕರಿಸಲು ನಿಮಗಾವ ಕಾರಣಗಳೂ ಸಿಗವು, ಜನರು ಇತ್ತೀಚೆಗೆ ಇನ್‌ಫ್ರಾರೆಡ್ ಫೋಟೋಗ್ರಾಫಿಯ ವಿಷಯ ತುಂಬಾ ಓದಿಕೇಳಿ ತಿಳಿದಿರುವರು ಆದರೆ ಜನರು ಈ ವಿಷಯದಲ್ಲಿ, ಬೇರೆಲ್ಲ ವಿಷಯಗಳಂತೆಯೇ ಏನೂ ತಿಳಿಯದವರಾಗಿದ್ದಾರೆ, ಜನರ ಈ ಅಜ್ಞಾನ ಅವಿದ್ಯೆ ಮತ್ತು ತಿಳಿಗೇಡಿತನಗಳಿಂದ ನಾವೇಕ ಲಾಭಗಳಿಸಬಾರದು?

(ಮುಂದಿನ ಸಂಚಿಕೆಯಲ್ಲಿ)

---

(ಒಂಭತ್ತನೇ ಪುಟದಿಂದ)

ನೀವೆ ಮೋಸಮಾಡಿಕೊಂಡಂತೆ ಕಡೆಯಲ್ಲಿ ನಿಮಗೆ ಆಘಾತವಾಗದೆ ಇರದು

—"ಇದೇನಾ ನಿಮ್ಮ ಕಲ್ಚರ್?" ಶರಶ್ಚಂದ್ರನೆಂದ—"ನಿಮ್ಮ ಹುಡುಗಿ ವಯಸ್ಕಳು. ನಾನು ವಯಸ್ಕ. ದರ್ಜೆಯ ದೃಷ್ಟಿಯಿಂದ ನನ್ನಲ್ಲಿ ಹಾಗೂ ನಿಮ್ಮಲ್ಲಿ ಯಾವ ವ್ಯತ್ಯಾಸವೂ ಇಲ್ಲ ವ್ಯತ್ಯಾಸವೇನಾದರೂ ಇದ್ದರೆ ಅದು ಕೇವಲ ದೇಶದ್ದು

—"ನಿಜ, ದೊಡ್ಡ ಮಹತ್ವವಿರುವುದಾದರೂ ಇದೇ ವಿಷಯಕ್ಕೆ" ಮುದುಕನೆಂದ "ಕೇವಲ ಈ ಕಾರಣದಿಂದಲೇ ತಾನೆ ಈ ವಿವಾಹವಾಗಕೂಡದು. ಅನ್ನೋದು ಇದಕ್ಕಿಂತ ಹೆಚ್ಚಾಗಿ ನಿಮ್ಮೊಡನೆ ಮಾತನಾಡಲು ನನಗೆ ಇಷ್ಟವಿಲ್ಲ." ಹೀಗೆಂದೇ ಹೇಳಿ ಆ ಮುದುಕ ಹೊರಟು ಬಿಟ್ಟ.

ಶರಶ್ಚಂದ್ರ ಅವಳನ್ನು ಮತ್ತೆ ಸಂಧಿಸಿದಾಗ ಮುದುಕ ಅವಳನ್ನು ಸಾಕಷ್ಟು ಗದರಿಸಿದ್ದಾನೆಂಬ ಸಮಾಚಾರ ಗೊತ್ತಾಯಿತು.

ಇಷ್ಟಾದರೂ ಸಹ ಅವರಿಬ್ಬರೂ ತಮ್ಮ ನಿಶ್ಚಯದಿಂದ ಕೂದಲಷ್ಟೂ ಕದಲಿರಲಿಲ್ಲ.

ಇಬ್ಬರು ಪರಸ್ಪರ ವಚನಬದ್ಧರಾಗಿ ಬಿಟ್ಟರು. ಹಾಗೂ ಒಂದು ದಿನ ಎಲ್ಲರ ಎದುರಿಗೆ ತಮ್ಮ ವಿವಾಹದ ನಿರ್ಣಯವನ್ನು ರಾಜಾರೋಷವಾಗಿ ಸ್ಪಷ್ಟ ಶಬ್ದಗಳಲ್ಲಿ ಘೋಷಿಸಿಬಿಟ್ಟರು. ಈಗ ನಿಸ್ಸಂದೇಹವಾಗಿ ಹಿರಿಯ ಸರ್ಜನ್‌ಗೆ ಬೆಂಕಿ ಬಿದ್ದ ಹಾಗಾಗಿ ಹೋಯಿತು. ಅವನು ಶರಶ್ಚಂದ್ರನ ಮೇಲೆ ಇಲ್ಲದ-ಸಲ್ಲದ ವ್ಯರ್ಥ ಆರೋಪಗಳನ್ನು ಹೊರಿಸಲು ಆರಂಭಿಸಿದ. ಪರಿಣಾಮ ಸ್ವರೂಪವಾಗಿ ಒಂದು ದಿನ ಶರಶ್ಚಂದ್ರ ತನ್ನ ಕೆಲಸವನ್ನೂ ಬಿಟ್ಟ ಕೈ ತೊಳೆದು ಕುಳಿತುಕೊಂಡುಬಿಟ್ಟ.

ಆ ಕಾಲದಲ್ಲಿ ಮಿಲಿಟರಿ ಕಾನೂನಿನ ಪ್ರಕಾರ, ಕೆಲಸವನ್ನು ಬಿಡುತ್ತಲೇ ನೇರವಾಗಿ ಇಂಗ್ಲಂಡಿಗೆ ತೆರಳುವುದು ಅವನಿಗೆ ಅಸಾಧ್ಯವಾಗಿತ್ತು. ಅದೇ ಕಾಲಕ್ಕೆ ಸರಿಯಾಗಿ ಗಾಯಗೊಂಡ ಹಾಗೂ ಅಪ್ರಯೋಜಕರಾದ ಜನರನ್ನು ಒಂದು ಹಡಗಿನ ಮೂಲಕ ಹಿಂದೂಸ್ಥಾನಕ್ಕೆ ರವಾನಿಸಲಾಗುತ್ತಿತ್ತು. ಅದೇ ಹಡಗಿನಿಂದ ಶರಶ್ಚಂದ್ರನನ್ನೂ ಸಹ ವಾಪಸ್ಸು ಹಿಂದೂಸ್ಥಾನಕ್ಕೆ ಕಳುಹಿಸಿಬಿಡಲಾಯಿತು. ಈಗ ಅವನು ಆ ನರ್ಸಿನೊಡನೆ ಹೆಚ್ಚು ಪ್ರೀತ್ಯಾದರಗಳಿಂದ ವರ್ತಿಸುವ ಪ್ರಯತ್ನ ಕೈಗೊಂಡ. ಆದರೆ ಅವಳೆಂತಹವಳೆಂದರೆ ಅವನನ್ನು ತನ್ನ ಹತ್ತಿರ ಸುಳಿಯುವುದಕ್ಕೂ ಬಿಡುತ್ತಿರಲಿಲ್ಲ. ಅವನನ್ನು ಕಂಡರೆ ಸದಾಕಾಲ ದೂರವೇ ಇರುತ್ತಿದ್ದಳು. ದಿನ ಅವಳು ಹಿರಿಯ ಸರ್ಜನ್ನನೊಡನೆ ಸ್ಪಷ್ಟ ಶಬ್ದಗಳಲ್ಲಿ ಹೇಳಿಬಿಟ್ಟಳು—ಯಾರ ನಿಶ್ಚಿತಾರ್ಥವಾಗಿ ಬಿಟ್ಟಿರುತ್ತದೋ ಆ ಹುಡುಗಿ ವಿವಾಹಿತ ವಧುವಿಗಿಂತ ಭಿನ್ನಳೇನಲ್ಲ ಅವಳ ಈ ಉದ್ಗಾರಗಳನ್ನು ಸರ್ಜನ್ ನಗೆಯಾಟವಾಗಿ ಹಾರಿಸಿಬಿಟ್ಟ.

ಶರಶ್ಚಂದ್ರನು ಹೊರಟು ಹೋದುದರಿಂದ ಅವನ ಸಂಗಡಿಗರಿಗೂ ಬಹಳ ದುಃಖವಾಯಿತು. ಗುಲಾಮರು--ಪ್ರಭುಗಳು ಅನ್ನುವ ಯಾವ ಭೇದ-ಭಾವವೂ ಅವರ ಮನಸ್ಸಿನಲ್ಲಿರಲಿಲ್ಲ. ಕರಿ ಬಿಳಿ ಅನ್ನುವುದು ಬೇಧವನ್ನು ಸಹ ಅವರುಲ್ಲಿಲ್ಲ. ಈ ಹಿರಿಯ ಸರ್ಜನ್ ಹಿಂದೂಸ್ಥಾನದಿಂದ ಬಂದಿದ್ದ. ಆದ್ದರಿಂದಲೇ ಕರಿಯ ಬಿಳಿ ಅನ್ನುವ ಬೇಧ ಅವನಿಗೆ ಅಷ್ಟು ತೀವ್ರವಾಗಿ ಅನುಭವಕ್ಕೆ ಬರುತ್ತಿತ್ತು. ಅಲ್ಲದೇ ಶರಶ್ಚಂದ್ರನು ಹಿಂದೂಸ್ಥಾನದವನಾದ್ದರಿಂದಲೇ ಅವನನ್ನೂ ಬಹುವಾಗಿ ಪೀಡಿಸುತ್ತಿದ್ದ. ಇದು ಆ ನರ್ಸಿನಂತೆಯೇ ವಿಶ್ವವಂಗೂ ಕೂಡ ಗೊತ್ತಿತ್ತು,

ಶರಶ್ಚಂದ್ರನು ಹೊರಟು ಹೋದ ಕೆಲವಾರು ದಿನಗಳ ನಂತರವೇ ಆ ನರ್ಸ್ ಕೂಡ ರಜೆ ತೆಗೆದುಕೊಂಡು ಇಂಗ್ಲಂಡಿಗೆ ಹೊರಟುಬಿಟ್ಟಳು, ಅವಳಿಗೂ ಸಹ ಕೆಲಸ ಮಾಡಲು ಮನಸ್ಸೇ ಬರುತ್ತಿರಲಿಲ್ಲ.

ಹಿರಿಯ ಸರ್ಜನ್ ರಣಭೂಮಿಯಲ್ಲಿದ್ದ ಹಾಗೆ ಗಾಯಗೊಂಡುಬಿಟ್ಟ. ಇದರಿಂದ ಅನೇಕ ದಿನಗಳ ವರೆಗೆ ಅವನು ಮಿಲಿಟರಿ ಆಸ್ಪತ್ರೆಯಲ್ಲಿರಬೇಕಾಗಿ ಬಂತು, ಗುಣಮುಖನಾಗುತ್ತಲೇ ಅವನನ್ನು ಇಂಗ್ಲಂಡಿನ ಮಿಲಿಟರಿ ನರ್ಸಿಂಗ್ ಹೋಂಗೆ ಕಳುಹಿಸಿ ಬಿಡಲಾಯಿತು,

ಅಲ್ಲಿಯ ತನಕ ಯುದ್ಧ ನಿಂತಿರಲಿಲ್ಲ. ಆ ಹೋಮಿನಲ್ಲಿ ರೋಗಿಗಳನ್ನು ಭೇಟ್ಟಿಸಲು ದೊಡ್ಡ—ದೊಡ್ಡ ಮನುಷ್ಯರು ಬರುತ್ತಿದ್ದರು. ರೋಗಿಗಳ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದರು ಕೆಲ—ಕೆಲವರಂತೂ ರಣಭೂಮಿಗೆ ಸಂಬಂಧ ಪಟ್ಟಂತೆ ಅವರೊಂದಿಗೆ ಇಂಟರ್‌ವ್ಯೂ ಸಹ ತೆಗೆದುಕೊಳ್ಳುತ್ತಿದ್ದರು-

ಇದೇ ತರಹ ರೋಗಿಗಳನ್ನು ಸಂಧಿಸಲು ಕೆಲವು ಮಂದಿ ಒಮ್ಮೆ ಆ ಹೋಂಗೆ ಬಂದಿದ್ದರು. ಅವರ ಪೈಕಿ ಇಬ್ಬರು ವ್ಯಕ್ತಿಗಳನ್ನು ಕಂಡು ಹಿರಿಯ ಸರ್ಜನ್ ಆಶ್ಚರ್ಯಚಕಿತನಾಗಿಬಿಟ್ಟ! ಶರಶ್ಚಂದ್ರ ಅವನ ಎದುರಿಗೆ ಹೋದ, ಅವನೊಡನೆ ಅದೇ ನರ್ಸ್ ಇದ್ದಳು. ಅವಳ ಪರಿಚಯ ಕೊಡುತ್ತಾ ಅವನು ಸರ್ಜನನ್ನು ಕುರಿತೆಂದ—'ಇವಳು ನನ್ನ ಹೆಂಡತಿ ಮಿಸೆಸ್ ಶರಶ್ಚಂದ್ರ. ನೀವು ನಾನೊಬ್ಬ ಸಾಧಾರಣ ಮನುಷ್ಯ ಅಂತ ಕಲ್ಪನೆ ಮಾಡಿಕೊಂಡಿದ್ರಿ ಅಂತ ಕಾಣುತ್ತೆ. ಹಿಂದೂಸ್ತಾನಕ್ಕೆ ಬರುವ ಅನೇಕ ಆಂಗ್ಲರಲ್ಲಿ ಹಿಂದುಸ್ತಾನಿಗಳನ್ನು ಕುರಿತು ಯಾವ ಕಲ್ಪನೆಯಿರುತ್ತದೊ, ನಿಮ್ಮ ಆ ಕಲ್ಪನೆಯೂ ಸಹ ಅದೇ ತರಹ ಇತ್ತು. ನಿಮ್ಮಲ್ಲಿನ ಲೇಖಕರ ಕಂಠಶೋಷಣೆ ಮಾಡಿಕೊಂಡು ಎಷ್ಟೇ ಅರಚಿಕೊಳ್ಳಲಿ—'ಪೂರ್ವ ಮತ್ತು ಪಶ್ಚಿಮ ಎಂದೂ ಸೇರಲಾರವು' ಅಂತ ಆದರೆ ಅವರ ಈ ಕೂಗಾಟ ಕೇವಲ ಭ್ರಮೆ. ನೀವೂ ಸಹ ತಪ್ಪುಮಾಡಿದಿರಿ. ಹಾಗೂ ನನ್ನನ್ನು ಕೆಲಸದಿಂದ ತೆಗೆದುಬಿಟ್ಟಿರಿ. ನಾನೂ ಹಿಂದೂಸ್ತಾನಕ್ಕೆ ಮರಳಿದೆ. ಮರು ಹಡಗಿನಿಂದಲೇ ಇಲ್ಲಿಗೆ ಬಂದು ಬಿಟ್ಟೆ ನಾನಾದರೋ ಇವಳನ್ನು ಅಲ್ಲಿಗೆ ಕರೆಯುತ್ತಿದ್ದ. ಆದರೆ ಸುಯೋಗದಿಂದ ಆ ಸಮಯದಲ್ಲಿ ಇವಳು ಇಲ್ಲಿಯೇ ಇದ್ದಳು. ನಮ್ಮಿಬ್ಬರ ವಿವಾಹ ಆಗಿಬಿಟ್ಟಿತು, ಈಗ ನಾವು ಬಹಳ ಸುಖದಿಂದಿದ್ದೇವೆ. ಅಲ್ಲದೆ ನಮ್ಮ ಈ ಎಲ್ಲಾ ಸುಖ-ಸಂಪತ್ತುಗಳ ಶ್ರೇಯಸ್ಸು ತಮಗೆ ಸೇರಿದ್ದು."

ಹಿರಿಯ ಸರ್ಜನ್ ತಲೆಬಾಗಿಸಿಕೊಂಡ

—ಸುಭೋದ.

---

ಕಾರ್ಕಳ ಮುನ್ಸಿಫ್ ಕೋರ್ಟಿನಲ್ಲಿ

O·S No. 135/1967

ಹುಲ್ಕಿ ಶ್ರೀ ವೆಂಕಟ್ರಮಣ ದೇವರ ಭಂಡಾರ ಯಿದ್ದ ಮೊನೇಜಿಂಗ ಟ್ರಸ್ಟಿಗಳು U. ಕೃಷ್ಣ ರಾವ್ ಸಹಾ—ವಾದಿರು,

ಪೂಲಾ ಬಾಯಿ ಸಹಾ—ಪ್ರತಿವಾದಿರು.

4 ರಪ್ರೇಸ ಬಾಯಿ ಬಲ್ತಿಬಾಂಡಿ ಸೋಜರ ಮಗಳು. ಕಾರ್ಕಳ ತಾಲ್ಲೂ ಕಡಂದಲೆ ಗ್ರಾಮದ ಗುಡ್ಡೆಬೆಟ್ಟು ಎಂಬಲ್ಲಿರುವವಳು—

ಸದ್ರಿ 4ನೇ ಪ್ರತಿವಾದಿ ಆದ ನಿಮಗೆ ಈ ಮೂಲಕ ತಿಳಿಸುವದೇನಂದ್ರೆ.

ನೀವು ಮತ್ತು 1, 2, 3ನೇ ಪ್ರತಿವಾದಿರು ಕೂಡಾ ವಾದಿ ದೇವರ ಭಂಡಾರದ ವಳಗೆ ಚಾಲಗೇಣಿ ಹಕ್ಕಿನಿಂದ ಅನುಭವಿಸಿ ಬರುತಿದ್ದ ಅಸ್ತಿ ಬಾಬ್ತು ವಾದಿ ದೇವರ ಭಂಡಾರಕ್ಕೆ ತಾ. 31—3—1964ನೇ ವ್ಯಾದಿಗೆ ಬರತಕ್ಕ ಚಾಲಗೇಣಿ ಬಡ್ಡಿ ಕೂಡಾ ರೂಪಾಯಿ 661—00ಕ್ಕೆ ನಿಮ್ಮ ಮೇಲೆ ದಾಖಲ್ಲು ಮಾಡಿದ ಸದ್ರಿ ದಾವೆಯು ತಾರೀಕು 28-9-1967ಕ್ಕೆ ನಿಮಗೆ ಅಕೈರ ನೋಟೀಸಿಗೆ ಇಟ್ಟಿದೆ. ಆಕ್ಷೇಪ ಇದ್ರೆ ಸದ್ರಿ ದಿನ ಬೆಳಿಗ್ಗೆ 10 ಘಂಟೆಗೆ ಮೇಲ್ಕಂಡ ಕೋರ್ಟು ಮುಂದೆ ನೀವು ಹಾಜರಾಗಿ ಉದಾಹಂಣೆ ಕೊಡತಕ್ಕದ್ದು. ತಪ್ಪಿದ್ರೆ ನಿಮ್ಮ ಗೈರಹಾಜರಿಯಲ್ಲಿ ದಾವಾ ತೀರ್ಮಾನವಾಗುವದುಎಂತ ಕೋರ್ಟು ಹುಕುಂ ಪ್ರಕಾರ ತಿಳಿಸಿಯದೆ.

K. S. Kamath
Advocate for Plaintiff

Karkal
14—9—1967

## ತುಳುನಾಡಿನ ಇತಿಹಾಸ

ಉಡುಪಿ ರಾಷ್ಟ್ರಕವಿ ಸಂಶೋಧನಾ ಕೇಂದ್ರದ ಆಶ್ರಯದಲ್ಲಿ ತುಳುನಾಡಿನ ಪ್ರಾಚೀನ ಇತಿಹಾಸದ ಕುರಿತು ಭಾರತಸರಕಾರದ ಶಿಲಾಲಿಪಿ ಇಲಾಖೆಯ ಡೆಪ್ಯುಟಿ ಸುಪರಿಂಟೆಂಡೆಂಟ್ ಡಾ॥ ಕೆ. ವಿ. ರಮೇಶರವರು ತುಳುನಾಡಿನ ಪ್ರಾಚೀನ ಇತಿಹಾಸ ಎನ್ನುವ ಕುರಿತು ಎಂ. ಜಿ. ಎಂ. ಕಾಲೇಜಿನಲ್ಲಿ ಭಾಷಣ ಮಾಡಿದರು.

ಪ್ರಿನ್ಸಿಪಾಲ್ ಕು. ಶಿ. ಹರಿದಾಸ ಭಟ್ಟರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

ಆರಂಭದಲ್ಲಿ ಮಿಲಾಗ್ರಿಸ ಕಾಲೇಜಿನ ಪ್ರಿನ್ಸಿಪಾಲ್ ಶ್ರೀ ಗುರುರಾಜ ಭಟ್ಟರು ಸ್ವಾಗತ ಭಾಷಣ ಮಾಡಿದರು.

## ಸ್ಥಳೀಯ ಸಮಸ್ಯೆಗಳ ಕುರಿತು ಲೋಬೋಪ್ರಭುಗಳ ವಿಚಾರ ವಿನಿಮಯ

ಉಡುಪಿ ಮತದಾರ ಕ್ಷೇತ್ರದ ಎಂ. ಪಿ. ಗಳಾಗಿರುವ ಶ್ರೀ ಜೆ. ಎಂ. ಲೋಬೋ ಪ್ರಭುಗಳವರು ಉಡುಪಿ ಡಬ್ಲ್ಯು. ಡಿ. ಪ್ರವಾಸಿ ಮಂದಿರದಲ್ಲಿ ಸಪ್ಟಂಬರ ತಾ. 13ರಂದು ಉಡುಪಿ ಕ್ಷೇತ್ರದ ಸಮಸ್ಯೆ ಕುರಿತು ಸಂಘ ಸಂಸ್ಥೆ ಹಾಗೂ ವ್ಯಕ್ತಿಗಳೊಡನೆ ವಿಚಾರ ವಿನಿಮಯ ನಡೆಸಿದರು.

ಉಡುಪಿ ಚೇಂಬರ್ ಆಫ್ ಕಾಮರ್ಸ್ ಜಿಲ್ಲೆಯ ಸಮಾಜ ಹಾಗೂ ಇತರ ಸರಕಾರೀ ಇಲಾಖೆಯವರೊಡನೆ ಸಮಾಲೋಚನೆ ನಡೆಸಿದರು.

ರಾತ್ರಿ ಉಡುಪಿ ಬೇಕರಿ ಓನರ್ಸ್ ಎಸೋಸಿಯೇಶನವರು ಅವರಿಗೊಂದು ಸತ್ಕಾರ ಕೂಟವನ್ನೇರ್ಪಡಿಸಿದ್ದರು.

ಎಸೋಸಿಯೇಶನ ಅಧ್ಯಕ್ಷ ಶ್ರೀ ಟಿ ಎ ವಾಸುದೇವನ್‌ರವರು ಮನವಿಯೊಪ್ಪಿಸಿ ಸಕ್ಕರೆ ಮತ್ತು ಮೈದಾ ಹಿಟ್ಟನ್ನು ಬಂದೀ ರೀತಿಯಲ್ಲಿ ಪ್ರತಿ ತಿಂಗಳ ಆರಂಭದಲ್ಲಿ ಬೇಕರಿಯವರಿಗೆ ಒದಗಿಸುವ ವ್ಯವಸ್ಥೆಯಾಗಬೇಕೆಂದು ಮನವಿಯೊಪ್ಪಿಸಿದರು.

ಅಲ್ಲದೆ ಉಡುಪಿ ಕಾಂಗ್ರೆಸ್ ಕಾರ್ಯಕರ್ತರು ಅಧಿಕಾರಿಗಳ ವಿರುದ್ಧ ಅಕ್ಷಮ್ಯ ಆರೋಪ ಮಾಡುವ ಮತ್ತು ಹಲವು ಬೇಕರಿಗಳಿಗೂ ಅಂಗಡಿಗಳಿಗೂ ಫುಡ್ ಇನ್ಸ್ಪೆಕ್ಟರ್ ಅಧಿಕಾರಿಗಳೊಡನೆ ಧಾಳಿ ನಡೆಸಿದ ಪ್ರಕರಣದ ಕುರಿತು ಎಸೋಸಿಯೇಶನವು ತನ್ನ ತೀವ್ರ ಪ್ರತಿಭಟನೆಯನ್ನು ವ್ಯಕ್ತಪಡಿಸಿದರು. ರಾಜಕೀಯ ಪಕ್ಷಕ್ಕೆ ಸೇರಿದವರು ಅಧಿಕಾರದಲ್ಲಿ ಹಸ್ತಕ್ಷೇಪ ಮಾಡುವುದು ಸರಿಯಲ್ಲವೆಂದು ಶ್ರೀ ಲೋಬೋ ಪ್ರಭುಗಳು ವಿವರಿಸಿದರು.

ಉಡುಪಿ ನಗರಸಭೆಯ ಯೋಜನೆ ಅಲೆವೂರು ಸೇತುವೆ ಗಂಗೊಳ್ಳಿ ಸೇತುವೆ ಮಲ್ಪೆ ಫಿಶರೀಸ್ ಹಾರ್ಬರ್ ಮೊದಲಾದ ಕಾರ್ಯಗಳ ಕುರಿತೂ ಅವರು ವಿವರಣೆಯನ್ನಿತ್ತರು.

ಸ್ಥಳೀಯ ಸಮಸ್ಯೆಗಳ ಕುರಿತು ತಾವು ತಮ್ಮಿಂದ ಸಾಧ್ಯವಿರುವಷ್ಟು ಕೆಲಸ ಮಾಡುವದಾಗಿ ಅವರು ಭರವಸೆಯನ್ನಿತ್ತರು.

ಶ್ರೀಗಳಾದ ಟಿ. ಎ. ವಾಸುದೇವನ್ ಎಸ್. ಪಿ. ಕಾಮತ್ ಜಯವಂತ ಶೆಣೈ ಮತ್ತು ಟಿ. ಗೋವಿಂದನ್‌ರವರು ಸ್ಥಳೀಯ ಸಮಸ್ಯೆಗಳ ಕುರಿತು ವಿವರಣೆಯಿತ್ತರು.

ಕೊನೆಯಲ್ಲಿ ಶ್ರೀ ಎಲ್. ಡಿ. ಸಲ್ಡಾನಾರವರು ಧನ್ಯವಾದ ಸಮರ್ಪಿಸಿದರು.

## ಪದವೀಧರ ಲಾ ವಿದ್ಯಾರ್ಥಿಗಳಿಗೆ ಸನ್ಮಾನ

ಉಡುಪಿ ಲಾ ಕಾಲೇಜಿನ ಪದವೀಧರ ವಿದ್ಯಾರ್ಥಿಗಳನ್ನು ಸನ್ಮಾನಿಸುವ ಸಮಾರಂಭವೊಂದು ಡಿಸ್ಟ್ರಿಕ್ಟ್ ಜಡ್ಜ್ ಶ್ರೀ ಶ್ರೀನಿವಾಸ ಅಯ್ಯಂಗಾರರ ನೇತೃತ್ವದಲ್ಲಿ ನೆರವೇರಿತು. ಡಾ॥ ವಿ. ಮಾಧವ ಪೈಗಳು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಕಾಲೇಜ್ ಯೂನಿಯನ್ ಅಧ್ಯಕ್ಷ ಶ್ರೀ ಶ್ರೀಧರ ಅಂಬಾರ್‌ರವರು ಸ್ವಾಗತಿಸಿದ ತರುವಾಯ ಕಾಲೇಜ್ ಪ್ರಿನ್ಸಿಪಾಲ್ ಶ್ರೀ ಜಿ ಡಿ. ದೇಶಪಾಂಡೆಯವರು ಮಾನ್ಯ ಅತಿಥಿಗಳ ಪರಿಚಯ ಮಾಡಿಸಿಕೊಟ್ಟರು.



ಶ್ರೀ ನಂಬಿಯಾರರು ಪದವೀಧರ ವಿದ್ಯಾರ್ಥಿಗಳ ಪರಿಚಯ ಮಾಡಿಕೊಟ್ಟ ತರುವಾಯ ಶ್ರೀಗಳಾದ ಪಿ. ಐ. ಅಲೆಕ್ಸಾಂಡರ್ ಮತ್ತು ವೆಂಕಟಾಚಲರಾಯರು ಪದವೀಧರ ವಿದ್ಯಾರ್ಥಿಗಳ ಪರವಾಗಿ ಮಾತನಾಡಿದರು.

ಮಾನ್ಯ ನ್ಯಾಯಾಧೀಶರು ವಕೀಲ ವೃತ್ತಿ ಅತ್ಯಂತ ಗೌರವಾರ್ಹವಾಗಿದ್ದು ವಿದ್ಯಾರ್ಥಿಗಳು ಶಿಸ್ತುಬದ್ಧ ಜೀವನ ಹಾಗೂ ಉತ್ತಮ ಗುಣನಡತೆಗಳಿಂದ ವಿಶ್ವಕ್ಕೆ ಆದರ್ಶಪ್ರಾಯವಾಗಿರಬೇಕೆಂದು ಹೇಳಿದರು.

ಅಧ್ಯಕ್ಷರು ಕಾಯಿದೆ ಕಾನೂನುಗಳ ರಕ್ಷಣೆಯ ಕಾರ್ಯವನ್ನು ವಕೀಲ ವೃತ್ತಿಯವರು ಮಾಡಬೇಕೆಂದರು.

ಕಾರ್ಯದರ್ಶಿ ಶ್ರೀ ಚೆನ್ನಬಸಪ್ಪನವರು ಧನ್ಯವಾದ ಸಮರ್ಪಿಸಿದರು.

## ಕುಟುಂಬ ಯೋಜನೆಯ ಕುರಿತು

ಅ. ಭಾ. ಕುಟುಂಬ ಯೋಜನಾ ಸಂಸ್ಥೆಯ ಮಣಿಪಾಲ ಕೇಂದ್ರದವರು ಕುಟುಂಬ ಯೋಜನಾ ಸಪ್ತಾಹವನ್ನಾಚರಿಸುತ್ತಲಿದ್ದು ಮಣಿಪಾಲ ಕೇಂದ್ರದ ಅಧ್ಯಕ್ಷ ಶ್ರೀ ಟಿ ರಮೇಶ ಪೈಗಳು ಮಣಿಪಾಲ ಕೇಂದ್ರವು ಈ ದಿಶೆಯಲ್ಲಿ ಈ ವರೆಗೆ ಸಾಧಿಸಿರುವ ಪ್ರಗತಿಯನ್ನು ಉಡುಪಿ ಪತ್ರಿಕೋದ್ಯಮಿಗಳ ಸಭೆಯಲ್ಲಿ ವಿವರಿಸಿದರು.

ಈ ವರ್ಷ ಉಡುಪಿ ಮುನಿಸಿಪಲ್ ಕ್ಷೇತ್ರದಲ್ಲಿ ಒಂದು ನಿರ್ದಿಷ್ಟ ಕಾರ್ಯಕ್ರಮವನ್ನಿರಿಸಿಕೊಂಡು ಈ ಯೋಜನೆಯನ್ನು ಕೈಗೊಳ್ಳಲಾಗುವದೆಂದೂ ಇದರ ಯಶಸ್ಸಿಗೆ ಸಾರ್ವಜನಿಕರ ಹಾಗೂ ಪತ್ರಿಕೆಯವರ ಸಹಾಯ ಸಹಕಾರ ಅವಶ್ಯವೆಂದೂ ಅವರು ಹೇಳಿದರು.

## ಸಾರ್ವಜನಿಕ ಸಭೆ

ಪ್ರಜಾಸೋಶಲಿಸ್ಟ್ ಪಕ್ಷದ ವತಿಯಿಂದ ಅಟಲ್‌ಬಿಹಾರಿ ಎಸ್. ವಿ. ಎಸ್. ಹಾ. ಎ. ಶಾಲಾ ವಠಾರದಲ್ಲಿ ಶ್ರೀ ಕೆ. ವಿ. ನರಸಿಂಹಾಚಾರ್ಯರ ಅಧ್ಯಕ್ಷತೆಯಲ್ಲಿ ಸಾರ್ವಜನಿಕ ಸಭೆಯೊಂದು ಜರಗಿ ಶ್ರೀಗಳಾದ ಶಿರ್ವಾಡಿ ವಿಠಲ ಪಿಂಟೋ ಎ. ಈಶ್ವರ ಭಟ್ ಮತ್ತು ಕೆ. ರತ್ನಾಕರ ಶೆಟ್ಟರಿಂದ ಭಾಷಣಗಳಾದವು.

## ಅ. ಭಾ. ಫೋಟೋಗ್ರಾಫಿ ಸ್ಪರ್ಧೆಯಲ್ಲಿ ಮಣಿಪಾಲ ಇಂಜಿನಿಯರಿಂಗ್ ಕಾಲೇಜಿಗೆ ಮೂರು ಪ್ರಥಮ ಬಹುಮಾನ

ಕೊಯಂಬತ್ತೂರಿನ ಪಿ ಎಸ್ ಜಿ. ಇಂಜಿನಿಯರಿಂಗ್ ಕಾಲೇಜಿನವರು ಏರ್ಪಡಿಸಿದ ಅ. ಭಾ. ಫೋಟೋಗ್ರಾಫಿಕ್ ಸ್ಪರ್ಧೆಯಲ್ಲಿ ಮಣಿಪಾಲ ಇಂಜಿನಿಯರಿಂಗ್ ಕಾಲೇಜಿನ ವಿದ್ಯಾರ್ಥಿ ಸುರೇಂದ್ರ ಮೋಹನ ಮನಕಟಲೆ ಮತ್ತು ಶ್ರೀ ರಘುವೀರಯವರು ಕ್ರಮವಾಗಿ ಎರಡು ಮತ್ತು ಒಂದು ಪ್ರಥಮ ಬಹುಮಾನಗಳನ್ನು ಪಡೆದರು.

## ಮಿಲಾಗ್ರಿಸ್ ಕಾಲೇಜಿನಲ್ಲಿ

ಕಲ್ಯಾಣಪುರ ಮಿಲಾಗ್ರಿಸ್ ಕಾಲೇಜಿನಲ್ಲಿ ಭಾರತ ಸರಕಾರದ ಶಿಲಾಲಿಪಿ ಇಲಾಖೆಯ ಡಾ॥ ಕೆ ವಿ. ರಮೇಶ ಅವರಿಂದ ತುಳುನಾಡಿನ ಮಧ್ಯಯುಗೀನ ಇತಿಹಾಸ ವನ್ನುವ ಕುರಿತು ಭಾಷಣ ನಡೆಯಿತು.

ಕಾಲೇಜಿನ ಪ್ರಿನ್ಸಿಪಾಲ್ ಶ್ರೀ ಪಿ. ಗುರುರಾಜ ಭಟ್ಟರು ಸ್ವಾಗತಿಸಿದರು.

## ಕೈಪುಂಜಾಲ್ ಮೊಗವೀರ ಸಂಘ

ಕೈಪುಂಜಾಲ್ ಮೊಗವೀರ ಸಹಕಾರಿ ಸಂಘದ ವಾರ್ಷಿಕ ಮಹಾಧಿವೇಶನವು ಶ್ರೀ ಕೆ. ಗಣೇಶರಾಜರವರ ಅಧ್ಯಕ್ಷತೆಯಲ್ಲಿ ಜರಗಿ ಮುಂದಿನ ವರ್ಷಕ್ಕೆ ಶ್ರೀಗಳಾದ ಕೆ. ಗಣೇಶರಾಜ್ ಅಧ್ಯಕ್ಷ ಪುರುಷೋತ್ತಮ ಕರ್ಕೇರ ಕಾರ್ಯದರ್ಶಿ ಗಿರಿಯ ಸುವರ್ಣ ಸರ್ಕಾರಗು ರಿಕಾರ ಕೃಷ್ಣಯ್ಯ ಸದಸ್ಯರಾಗಿದ್ದು ಆಡಳಿತ ಸಮಿತಿಯನ್ನು ರಚಿಸಲಾಯಿತು.

ಆರಂಭದಲ್ಲಿ ಶ್ರೀ ಕೃಷ್ಣ ಸುವರ್ಣರು ಸ್ವಾಗತಿಸಿದರು. ಶ್ರೀ ಪುರುಷೋತ್ತಮ ಕರ್ಕೇರರು ವರದಿಯನ್ನೊಪ್ಪಿಸಿದರು.

ಫಿಶರೀಸ್ ಸಹಕಾರಿ ಇನ್ಸ್‌ಪೆಕ್ಟರ್ ಶ್ರೀ ವೈ. ಜಿ. ಮಗೂಲರು ಸಹಕಾರಿ ತತ್ವ ಹಾಗೂ ಅದರ ಪ್ರಯೋಜನದ ಕುರಿತು ವಿವರಿಸಿದರು.

ಅಧ್ಯಕ್ಷರ ಸಮಯೋಚಿತ ಭಾಷಣಾನಂತರ ಶ್ರೀ ಪುರುಷೋತ್ತಮ ಕರ್ಕೇರರು ಧನ್ಯವಾದ ಸಮರ್ಪಿಸಿದರು.

## ಜಿಲ್ಲಾ ಪ್ರಾಥಮಿಕ ಶಿಕ್ಷಕರ ಕೌನ್ಸಿಲ್ ಸಭೆ.

ದ. ಕ. ಜಿಲ್ಲಾ ಪ್ರಾಥಮಿಕ ಶಿಕ್ಷಕರ ಕೌನ್ಸಿಲ್ ಸಭೆಯು ಮಂಗಳೂರು ಗಣಪತಿ ಹೈಸ್ಕೂಲಿನಲ್ಲಿ ಶ್ರೀ ಸುಬ್ಬಣ್ಣ ಹೆಗ್ಡೆಯವರ ಅಧ್ಯಕ್ಷತೆಯಲ್ಲಿ ಜರಗಿತು.

ಕಾರ್ಯದರ್ಶಿ ಶ್ರೀ ಎಂ. ಅಣ್ಣಪ್ಪನವರು ಜಿಲ್ಲಾ ವಿದ್ಯಾಧಿಕಾರಿಗಳೊಡನೆ ವಿಚಾರವಿನಿಮಯ ಬೆಂಗಳೂರಿಗೆ ತೆರಳಿದ ನಿಯೋಗದ ಪ್ರತಿಕ್ರಿಯೆಗಳನ್ನು ವಿವರಿಸಿದರು.

ತರುವಾಯ ದ. ಕ ಜಿಲ್ಲಾ ಪ್ರಾ—ಶಿಕ್ಷಕ ಯೂನಿಯನ್ ಮೈಸೂರು ರಾಜ್ಯದ ಶಿಕ್ಷಣ ಪ್ರಾದೇಶಿಕನಿಗೆ ಸೇರಿದ ಯೂನಿಯನ್ ವತಿಯಿಂದ ಬೆಂಗಳೂರು ಪತ್ರಿಕೆಯನ್ನು ಹೊರಡಿಸುವ ಪಂಚಾಯತು ಶಿಕ್ಷಕರಿಗೆ ಪ್ರತಿ ತಿಂಗಳ 10ನೇ ತಾರೀಕಿನೊಳಗೆ ಸಂಬಳ ಸಿಗಬೇಕೆನುವ ನಿರ್ಣಯವನ್ನು ಸ್ವೀಕರಿಸಲಾಯಿತು.

ಅಧ್ಯಕ್ಷರ ಸಮಯೋಚಿತ ಭಾಷಣಾನಂತರ ಕಾರ್ಯದರ್ಶಿ ಶ್ರೀ ಅಣ್ಣಪ್ಪನವರು ಧನ್ಯವಾದ ಸಮರ್ಪಿಸಿದರು

## ಕವಿಗೋಷ್ಠಿ ಮತ್ತು ಕನಕ ಪ್ರತಿಭೆಯ ಉದ್ಘಾಟನೆ

ಉಡುಪಿ ಕರ್ನಾಟಕ ಸಂಘದ ಆಶ್ರಯದಲ್ಲಿ ಕವಿಗೋಷ್ಠಿಯೊಂದು ಉಡುಪಿ ಶ್ರೀ ಪೂರ್ಣಪ್ರಜ್ಞ ಕಾಲೇಜಿನ ಪ್ರಿನ್ಸಿಪಾಲ್ ಡಾ॥ ಶಂಕರನಾರಾಯಣ ಅಡಿಗರ ಅಧ್ಯಕ್ಷತೆಯಲ್ಲಿ ಜರಗಿತು.

ಸಂಘದ ಅಧ್ಯಕ್ಷ ಶ್ರೀ ಕು. ಶಿ ಹರಿದಾಸ ಭಟ್ಟರು ಸ್ವಾಗತ ಭಾಷಣ ಮಾಡಿದರು. ಈ ಜಿಲ್ಲೆಯ ತರುಣ ಕವಿಗಳಾದ ಸರ್ವಶ್ರೀ ಬನ್ನಂಜೆ ಗೋವಿಂದಾಚಾರ್ಯ, ಗುಂಡ್ಮಿ ಚಂದ್ರಶೇಖರ ಐತಾಳ, ಮುಲ್ಕಿ ರಾಮದಾಸ, ಅಂಬಾತನಯ ರಾಮಚಂದ್ರ, ಕುರಾಡಿ ಸೀತಾರಾಮ ಅಡಿಗ, ಸುಬ್ರಾಯ ಚೊಕ್ಕಾಡಿ, ಐರೋಡಿ ಗಣಪಯ್ಯ ಅಲ್ಸೆ, ಯಾದವೇಂದ್ರ ಉಡುಪಿ, ಯು. ಕೆ. ವಿ. ಆಚಾರ್ಯ ಉಡುಪಿ ಕಿರಣ,—ಇವರು ತಮ್ಮ ತಮ್ಮ ಕವಿತೆಗಳ ವಾಚಿಸಿದರು.

ಅಧ್ಯಕ್ಷರು ತಮ್ಮ ಭಾಷಣದಲ್ಲಿ ಕಾವ್ಯ ಮತ್ತು ಕಾವ್ಯರಸಿಕರ ಸಂಬಂಧವನ್ನು ವಿವರಿಸಿ ತಾವು ಬರೆದಿರುವ ಎರಡು ಕವಿತೆಗಳನ್ನು ಓದಿದರು.

ದ. ರಾ. ಬೇಂದ್ರೆ, ಎಸ್. ವೆಂಕಟರಾಜ ಬನ್ನಂಜೆ ಗೋವಿಂದಾಚಾರ್ಯ ಮತ್ತು ಕಯ್ಯಾರ ಕಿಂಞಣ್ಣ ರೈಗಳ ಕವಿತೆಗಳಿರುವ ಕನಕ ಪ್ರಭೆ ಎನ್ನುವ ಕವಿತಾ ಸಂಗ್ರಹವನ್ನು ಅಧ್ಯಕ್ಷರು ಈ ಸಂದರ್ಭದಲ್ಲಿ ಉದ್ಘಾಟಿಸಿದರು.

ಸಂಘದ ಕಾರ್ಯದರ್ಶಿ ಶ್ರೀ ಪಿ. ರಂಗನಾಥ ಶೆಣೈಯವರು ಧನ್ಯವಾದ ಸಮರ್ಪಿಸಿದರು.

## ಕುಟುಂಬಯೋಜನಾ ವಸ್ತುಪ್ರದರ್ಶನ ಹಾಗೂ ಪ್ರಕಾಶ ಪುರವಣಿ ಉದ್ಘಾಟನ

ಉಡುಪಿ ಅ. ಭಾ. ಕುಟುಂಬಯೋಜನಾ ಸಂಸ್ಥೆಯ ಮಣಿಪಾಲ ಕೇಂದ್ರದ ಆಶ್ರಯದಲ್ಲಿ ಉಡುಪಿ ರೋಟರಿ ಹಾಲಿನಲ್ಲಿ ಏರ್ಪಡಿಸಲಾದ ಕುಟುಂಬಯೋಜನಾ ವಸ್ತುಪ್ರದರ್ಶನವನ್ನು ದ. ಕ. ಜಿಲ್ಲಾ ವೈದ್ಯಾಧಿಕಾರಿ ಶ್ರೀ ಎ. ಡಿ. ನಾರ್ಲೇಕರರು ಉದ್ಘಾಟಿಸಿ ಸ್ವಯಂಪ್ರೇರಣೆಯಿಂದ ಸ್ವೀಕರಿಸಬೇಕಾಗಿರುವ ಯೋಜನೆಯನ್ನು ಯಶಸ್ವಿಯಾಗಲು ಪ್ರತಿಯೊಬ್ಬರೂ ಸಹಕಾರ ನೀಡಬೇಕೆಂದರು.

ಶ್ರೀಮತಿ ಕಲ್ಯಾಣಿ ಡಿ. ಶೆಟ್ಟರು ಪ್ರಕಾಶ ವಾರ ಪತ್ರಿಕೆಯ ಕುಟುಂಬಯೋಜನಾ ಪುರವಣಿಯನ್ನು ಉದ್ಘಾಟಿಸಿ ತಿಳಿವಳಿಕೆಯಿಲ್ಲದ ಬಡಕುಟುಂಬಗಳಿಗೆ ತೀವ್ರ ಅವಶ್ಯವಾಗಿರುವ ಈ ಯೋಜನೆಯನ್ನು ಜನಪ್ರಿಯಗೊಳಿಸಬೇಕಿದ್ದರೆ ಅಂಥ ಜನರಲ್ಲಿ ಈ ವಿಷಯದ ಬಗ್ಗೆ ತಿಳುವಳಿಕೆ ಮೂಡಿಸುವದು ಮುಖ್ಯವೆಂದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ ಡಾ॥ ಟಿ. ಮಾಧವ ಪೈಗಳ ತಮ್ಮ ಭಾಷಣದಲ್ಲಿ ಜನಸಂಖ್ಯೆಯ ಹೆಚ್ಚಳದಿಂದ ಉಂಟಾಗಿರುವ ಸಮಸ್ಯೆಯನ್ನು ಎದುರಿಸಲು ಪ್ರತಿಯೊಬ್ಬರೂ ತನ್ನ ಪಾಲಿನ ಸೇವೆಯನ್ನು ಸಲ್ಲಿಸಬೇಕೆಂದರು.

ಆರಂಭದಲ್ಲಿ ಶ್ರೀ ಟಿ. ರಮೇಶ ಪೈಗಳು ಸ್ವಾಗತಿಸಿದರು. ಕೊನೆಯಲ್ಲಿ ಶ್ರೀ ಎ. ಜೆ. ಅಲ್ಸೆಯವರು ಧನ್ಯವಾದ ಸಮರ್ಪಿಸಿದರು.

ತರುವಾಯ ಕುಟುಂಬಯೋಜನೆಗೆ ಸಂಬಂಧಿಸಿರುವ ಚಲಚಿತ್ರವನ್ನು ಕಲ್ಪನಾ ಥಿಯೇಟರಿನಲ್ಲಿ ಪ್ರದರ್ಶಿಸಲಾಯಿತು.

## ಶೈಕ್ಷಣಿಕ ಪ್ರಯೋಗದ ವಿಚಾರಗೋಷ್ಠಿ

ಹಂಗಾರಕಟ್ಟೆ ಚೇತನಾ ಹೈಸ್ಕೂಲಿನಲ್ಲಿ ಕಳೆದ ವರ್ಷ ಕೈಗೊಂಡಿದ್ದ ಶೈಕ್ಷಣಿಕ ಪ್ರಯೋಗವೊಂದರ ಕುರಿತು ವಿಚಾರಗೋಷ್ಠಿಯೊಂದು ಹೈಸ್ಕೂಲಿನಲ್ಲಿ ಶ್ರೀ ಬಿ. ಎಸ್. ಅಂಚನರ ಅಧ್ಯಕ್ಷತೆಯಲ್ಲಿ ಜರಗಿತು. ಶ್ರೀ ಎ. ಜೆ. ಅಲ್ಸೆಯವರು ಸ್ವಾಗತಿಸಿದರು. ತರುವಾಯ ಮುಖ್ಯೋಪಾಧ್ಯಾಯ ಶ್ರೀ ಎ ಸದಾನಂದ ಹೆಬ್ಬಾರರು ಪ್ರಯೋಗಕ್ಕೆ ಸಂಬಂಧಿಸಿರುವ ವರದಿಯೊಪ್ಪಿಸಿದರು. ಅಧ್ಯಾಪಕರ ನಿರ್ದೇಶನದಲ್ಲಿ ವಿದ್ಯಾರ್ಥಿಗಳ ಸ್ವಯಂ ಓದುವಿಕೆಯ ಪದ್ಧತಿಯು ಸಾಂಪ್ರದಾಯಿಕ ಭಾಷಣ ಪದ್ಧತಿಗಿಂತ ಉತ್ತಮವೆಂದು ಸಿಫಾರಸಿ ಪ್ರಯೋಗದ ಫಲಿತಾಂಶವನ್ನು ಓದಿದರು. ಶ್ರೀಗಳಾದ ಭವಾನಿ ರಾಯರು ಚರ್ಚೆಯನ್ನು ಆರಂಭಿಸಿದರು. ಶ್ರೀಗಳಾದ ಕು. ಶಿ. ಹರಿದಾಸ ಭಟ್, ಕೆ. ಆರ್. ಹಂದೆ, ಕೆ. ಆರ್. ಉಡುಪ, ಜೆ. ಜಿ. ಜಾರ್ಜ್, ಬಿ. ಸಿ. ನಾರಂಬಳ್ಳಿ, ಬೈಕಾಡಿ ವೆಂಕಟಕೃಷ್ಣ ರಾವ್, ಎನ್. ರಘುನಾಥ ಶೆಟ್ಟರು ಇದರಲ್ಲಿ ಭಾಗವಹಿಸಿದ್ದರು.

ಅಧ್ಯಕ್ಷರ ಸಮಯೋಚಿತ ಭಾಷಣಾನಂತರ ಶ್ರೀ ಎ ರಾಮಚಂದ್ರ ಕಾರಂತರು ಧನ್ಯವಾದ ಸಮರ್ಪಿಸಿದರು.

